ಮಾರ್ಚ್ 2025 ಸಂಚಿಕೆ-15




# ಶ್ರೀಗಂಧ

## ಕನ್ನಡ ಬರಹಗಳ ಸುಗಂಧ

ತಿಪ್ಪಗೊಂಡನಹಳ್ಳಿ ಜಲಾಶಯ, ಬೆಂಗಳೂರು ಜಿಲ್ಲೆ

## DIGITAL MAGAZINE

ಕಥೆ | ಕವನ | ಕವಿ ಪರಿಚಯ | ಲಲಿತ ಪ್ರಬಂಧ
ಹಾಸ್ಯ ಬರಹ | ವೈಚಾರಿಕ ಲೇಖನ | ಸಾಧಕರ ಪರಿಚಯ
ಸ್ಥಳ ಪರಿಚಯ | ಪುಸ್ತಕ ವಿಮರ್ಶೆ



# ಸಂಪಾದಕೀಯ

ಎಲ್ಲಾ ಕನ್ನಡಿಗರಿಗೂ ನಮಸ್ಕಾರ.

ನಿರಂತರ ಓದುಗರ/ಬರಹಗಾರರ ಉತ್ಸಾಹ ನಮಗೆ ಪ್ರೇರಣೆಯಾಗುತ್ತಿದೆ.

ಇಂದು ನಮ್ಮ ಪತ್ರಿಕೆಗೆ ಅತಿಥಿ ಸಂಪಾದಕಿಯಾಗಿ ಶ್ರೀಮತಿ ಪವಿತ್ರ ಹೆತ್ತೂರ್ ಅವರು ನಮ್ಮೊಂದಿಗಿದ್ದಾರೆ. ಇವರು ವೃತ್ತಿಯಲ್ಲಿ ವಕೀಲೆಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರಿಗೆ ಮೊದಲಿನಿಂದಲೂ, ಸಾಮಾಜಿಕ ಕಾರ್ಯಗಳಲ್ಲಿ ಆಸಕ್ತಿ, ಕನ್ನಡದ ಬಗ್ಗೆ ಅಭಿಮಾನ, ಒಲವು ಹೆಚ್ಚು. ಪ್ರವೃತ್ತಿಯಲ್ಲಿ ತಮ್ಮನ್ನು ತಾವು ಸಾಹಿತ್ಯದಲ್ಲಿ ತೊಡಗಿಸಿಕೊಂಡಿದ್ದಾರೆ, ಇವರ ಲೇಖನಗಳು, ಕಾನೂನು ಸಲಹೆಗಳು, ಕಥೆ, ಕವನಗಳು ಹಲವಾರು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಹಾಗೂ ಹಲವಾರು ಸಾಮಾಜಿಕ ಕಳಕಳ ಸಂಘ ಸಂಸ್ಥೆಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಅವರಿಗೆ ನಮ್ಮ ಹೃತ್ಪೂರ್ವಕ ಸ್ವಾಗತ.

ಸಾಹಿತಿಯೊಬ್ಬರು ಅವರ ಭಾಷಣದಲ್ಲಿ ಸಾಹಿತ್ಯ ಹೇಗಿರಬೇಕು ಅಂತ ಹೇಳುವಾಗ ಹೌದೆನಿಸಿತು. ಬರೆದಿದ್ದೆಲ್ಲಾ ಕಥೆ/ಕವನವಾಗದು. ಅದು ಬರೆದವರಿಗೆ ತೃಪ್ತಿಯಿರಬೇಕು/ಓದುಗರ ಮನ ಮುಟ್ಟುವಂತಿರಬೇಕು. ಆಡು ಭಾಷೆಯ ನೆಪದಲ್ಲಿ ಗ್ರಾಂಥಿಕ ಭಾಷೆಯನ್ನು ಹಾಳುಮಾಡಬಾರದು. ಸರಿಯಾದ ಪದಬಳಕೆಯಿಲ್ಲದೇ ಬರೆದರೆ ಎಂದಿಗೂ ಪದಜ್ಞಾನ ಹೆಚ್ಚುವುದಿಲ್ಲ. ಅಲ್ಪಪ್ರಾಣ, ಮಹಾಪ್ರಾಣ, ಹೃಸ್ವಸ್ವರ, ದೀರ್ಘಸ್ವರ, ಪ್ರಶ್ನಾತ್ಮಕ ವಾಕ್ಯಗಳು, ವಿಭಕ್ತಿ ಪ್ರತ್ಯಯ ಇತ್ಯಾದಿ ವ್ಯಾಕರಣಗಳನ್ನು ಸರಿಯಾಗಿ ಉಪಯೋಗಿಸದಿದ್ದರೆ ಬೇರೆಯೇ ಅರ್ಥಗಳನ್ನು ನೀಡುತ್ತವೆ. ಬನ್ನಿ ಗ್ರಾಂಥಿಕ ಭಾಷೆಯಿಂದ ನಮ್ಮ ಸಾಹಿತ್ಯವನ್ನು ಸಂವೃದ್ಧಿಗೊಳಿಸೋಣ.

ಈ ಸಂಚಿಕೆಯು ಕಥೆಗಳು, ಪ್ರೇಮ ಕವನಗಳು, ವ್ಯಕ್ತಿ ಪರಿಚಯ, ಪುಸ್ತಕ ವಿಮರ್ಶೆ, ಹಾಸ್ಯ, ನಾಟಕ ಮುಂತಾದ ಬರಹಗಳನ್ನು ಹೊತ್ತು ತಂದಿದೆ

ಸಿರಿಗನ್ನಡಂ ಗೆಲ್ಗೆ ಸಿರಿಗನ್ನಡಂ ಬಾಳ್ಗೆ.
ಧನ್ಯವಾದಗಳು
**ಉಮೇಶ್ ಬಿ ಪಿ**



# ಅತಿಥಿ ಸಂಪಾದಕರ ನುಡಿ

ಎಲ್ಲಾ ಸಾಹಿತ್ಯಾಸಕ್ತರಿಗೆ ನಮಸ್ಕಾರ,

"ಹಕ್ಕಿಗಿಂತಲೂ ಕರ್ತವ್ಯಕ್ಕೆ ಬೆಲೆ ಕೊಟ್ಟಾಗಲೇ ಹೆಣ್ಣು ಪರಿಪೂರ್ಣ"!!

ಮಾರ್ಚ್ ತಿಂಗಳು ಬಂತೆಂದರೆ ಸಾಕು ಮಹಿಳೆಯರಲ್ಲಿ ಅದೇನು ಒಂದು ರೀತಿಯ ಸಂಚಲನ, ತಿಂಗಳ ಪೂರ್ತಿ ನಡೆಯುವ ಸಭೆ ಸಮಾರಂಭಗಳಲ್ಲಿ ಮಹಿಳೆಯರದೆ ಧ್ವನಿ..!! ಮಹಿಳೆಯರಿಗಾಗಿ ವಿಶೇಷ ಸವಲತ್ತುಗಳನ್ನು ಸರ್ಕಾರದಿಂದ ಹಿಡಿದು ಕೆಲಸ ಮಾಡುವ ಕಛೇರಿಗಳಲ್ಲೂ ಕೊಡಮಾಡಲಾಗುತ್ತದೆ. ಮಾರ್ಚ್ ಎಂಟರಂದು ಪುರಷರೇ ಮುಂದೆ ಬಂದು ಮಹಿಳಾ ದಿನಾಚರಣೆ ಅಂಗವಾಗಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅರ್ಥಪೂರ್ಣ ಆಚರಿಸಿ ಸಂಭ್ರಮಿಸುತ್ತಾರೆ. ಆದರೆ... ಮಹಿಳೆ...??

ಹೆಣ್ಣು ಮಕ್ಕಳ ಅಬಿವೃದ್ಧಿ ಸಲುವಾಗಿ ಶೈಕ್ಷಣಿಕ, ಆಸ್ತಿ, ಸೇರಿದಂತೆ ಅನೇಕ ಹಕ್ಕುಗಳನ್ನು ನೀಡಿರುವುದಲ್ಲದೆ ನಮ್ಮ ಸಂವಿಧಾನ ಅನೇಕ ಕಾನೂನುಗಳನ್ನು ಹೆಣ್ಣು ಮಕ್ಕಳಗೆ ಸಲುವಾಗಿ ಬಹಳ ವರ್ಷಗಳ ಹಿಂದೆಯೇ ನೀಡಿದೆ. ಅದರ ಪರಿಣಾಮ ಮನೆಯಂಗಳದಿಂದ ಹಿಡಿದು ಚಂದ್ರನಂಗಳದವರೆಗೂ ಹಾರಲು ಹೆಣ್ಣಿಗೆ ರೆಕ್ಕೆ ಬಂದಿದೆ. ಆಧುನಿಕತೆ , ವೈಚಾರಿಕತೆಗೆ ತೆರೆದುಕೊಂಡಷ್ಟು ಹೆಣ್ಣು ಸ್ವಾತಂತ್ರ್ಯದ ಹೆಸರಿನಲ್ಲಿ ಸ್ವೇಚ್ಛೆಯ ಕಡೆಗೆ ಸಾಗಿದ್ದಾಳೆ , ಸಾಗುತ್ತಿದ್ದಾಳೆ, ಆರ್ಥಿಕವಾಗಿ ಸಬಲವಾದಷ್ಟು ಸಂಬಂಧ, ಆಸರೆ, ಅಕ್ಕರೆ ಬಂಧನಗಳಿಂದ ದೂರವಾಗುತ್ತಿದ್ದಾಳೆ..ಹಣ , ಆಸ್ತಿ, ಐಷಾರಾಮಿ ಬದುಕಿನ ದಾಹ ಹೆಚ್ಚಿದೆ.. ಅಬಲೆ ಹೆಣ್ಣನ್ನು ರಕ್ಷಿಸಲು ಇರುವ ಕಾನೂನು ಸಬಲೆಯರ ಮುಷ್ಟಿಯಲ್ಲಿ ಸಿಕ್ಕಿ ಗಂಡಸರ ಜೀವನವನ್ನು ಉಸಿರು ಕಟ್ಟಿಸುತ್ತಿವೆ.

ಒಂದೊಳ್ಳೆಯ ಸಂಸಾರಕ್ಕೆ ಹೆಣ್ಣು –ಗಂಡು ಇಬ್ಬರು ಸಮಾನ ಬಾಧ್ಯಸ್ಥರು ನಿಜಾ..ಆದರೆ ಇತ್ತೀಚಿನ ದಿನಗಳಲ್ಲಿ ಹೆಣ್ಣು ಹೆಚ್ಚು ಹಕ್ಕು ಚಲಾಯಿಸುತ್ತಿದ್ದಾಳೆ.. ಕರ್ತವ್ಯ ಮರೆಯುತ್ತಿದ್ದಾಳೆ. ಇದರಿಂದ ಸಂಸಾರಗಳು ಕೋರ್ಟ್ ಬಾಗಿಲನಲ್ಲಿ ಬಂದು ನಿಲ್ಲುತ್ತಿವಿ, ತವರಿನ ಸಂಬಂಧಗಳು

ಹಳಸುತ್ತಿವಿ. ಗಂಡ ಅನೈತಿಕ ಹಾದಿಯಲ್ಲಿ ಸಾಗಿದಾಗ, ದೌರ್ಜನ್ಯವೆಸಗಿದಾಗ ಅದನ್ನು ಸಹಿಸಿ, ಸಹನೆಯಿಂದ ಬುದ್ಧಿವಂತಿಕೆಯಿಂದ ತಿದ್ದಿ ಗಂಡನನ್ನು ಸರಿದಾರಿಗೆ ತಂದುಕೊಂಡು ಸಂಸಾರನ್ನು ಸರಿಮಾಡಿಕೊಂಡವರು ಬಹಳಷ್ಟು ಮಂದಿ ನಮ್ಮ ನಿಮ್ಮ ನಡುವೆ ಇದ್ದಾರೆ, ಏಕೆಂದರೆ ಗಂಡು ಹೆಣ್ಣಿನ ಮಾತನ್ನು ಕೇಳುತ್ತಾನೆ..ಪತಿ ನೀಡಿದ ಸ್ವಾತಂತ್ರ್ಯದ ದುರುಪಯೋಗ ಮಾಡಿಕೊಂಡು ಸಂಸಾರವನ್ನು ಸಸಾರ ಮಾಡಿ ಹಕ್ಕುಗಳ ಮೂಲಕ ಅಧಿಕಾರ ಚಲಾಯಿಸಿ ಕಾನೂನು ಕುಣಿಕೆಯಲ್ಲಿ ಸಿಲುಕಿಸಿ ತನ್ನ ಕರ್ತವ್ಯ ಜವಾಬ್ದಾರಿ ಮರೆತ ಮಹಿಳೆಯರು ಇದ್ದಾರೆ.... ಗಂಡು ಇದು ನನ್ನ ಹಕ್ಕು ಎಂದು ಎಲ್ಲಿಯೂ ಚಲಾಯಿಸುವುದಿಲ್ಲ... ಆದರೆ ಹೆಣ್ಣು ಮಕ್ಕಳ ಅಭಿವೃದ್ಧಿ, ನಿಜವಾಗಿಯೂ ನೊಂದ ಸ್ತ್ರೀಯರ ರಕ್ಷಣೆಗಾಗಿ ನೀಡಿರುವ ಎಲ್ಲಾ ಹಕ್ಕು ಮತ್ತು ಕಾನೂನುಗಳನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾಳೆ, ಈ ಹಕ್ಕುಗಳಿಂದಲೆ ಗಂಡಿನ ಮೇಲೆ ದೌರ್ಜನ್ಯ ಆಗುತ್ತಿವೆ. ಸಂಸಾರ ಮೂರಾಬಟ್ಟೆ ಆಗ್ತಿದೆ.. ಗಂಡಸನ್ನು ತಿದ್ದುವ ಶಕ್ತಿ ಹೆಣ್ಣಿಗಿದೆ... ಆದರೆ ಅದೇ ಹೆಣ್ಣು ಒಮ್ಮೆ ಹಾದಿ ತಪ್ಪಿದರೇ ಸರಿದಾರಿಗೆ ತರಲು ಆ ಸೃಷ್ಟಿಕರ್ತ ನಿಂದಲೂ ಸಾಧ್ಯವಿಲ್ಲ... ಅಭಿವೃದ್ಧಿ- ಅವನತಿ ಎರಡು ಅವಳಿಂದ ಮಾತ್ರ.. ಗಂಡು ನಿಮಿತ್ತ ಅಷ್ಟೆ. ಹಾಗಾಗಿ ಸಂಸಾರದ ಉಳಿವು -ಅಳಿವು ಹೆಣ್ಣಿನ ಕೈಯಲ್ಲಿ ಮಾತ್ರ ಇರೋದು. ಗಂಡಿಗೆ ಸಾಮಾಜಿಕ ಜವಾಬ್ದಾರಿ ಹೆಚ್ಚು.. ಆದರೆ ಹೆಣ್ಣಿಗೆ ಸಾಮಾಜಿಕ, ಕೌಟುಂಬಿಕ, ಸಾಂಸಾರಿಕ ಜವಾಬ್ದಾರಿ ಹೆಚ್ಚಾಗಿರುತ್ತದೆ.

"ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೇ ತತ್ರ ದೇವತಾ" ಎಂಬ ವಾಕ್ಯ ಹೆಣ್ಣಿನ ಶ್ರೇಷ್ಠತೆಯ ಬಗ್ಗೆ ಮನವರಿಕೆ ಮಾಡಿದೆ. "ಹೆಣ್ಣು ಮನೆಗೆ ಕನ್ನಡಿ ಇದ್ದಂಗೆ" ಎಂಬ ನುಡಿ ಬಹಳನೆ ಅರ್ಥಗರ್ಭಿತವಾದದ್ದು, ಗಂಡು ದೈಹಿಕವಾಗಿ ಅದೆಷ್ಟೇ ಬಲಾಢ್ಯನಾಗಿದ್ದರೂ ಹೆಣ್ಣು ಮಾನಸಿಕವಾಗಿ ಶಕ್ತಿಶಾಲಿ.. ಈ ಕಾರಣದಿಂದಲೇ ಪ್ರತಿಯೊಬ್ಬ ಪುರುಷನ ಯಶಸ್ಸಿನ ಹಿಂದೆ ಒಂದು ಹೆಣ್ಣು ಇದ್ದೆ ಇರುತ್ತಾಳೆ ..ಆಕೆಗೆ ಕರ್ತೃತ್ವ, ನೇತೃತ್ವ ಹಾಗೂ ಮಾತೃತ್ವ ರಕ್ತಗತವಾಗಿ ಬಂದಿದೆ. ಗಂಡಿಗೆ ಅಸಾಧ್ಯವಾದ್ದನ್ನ ಹೆಣ್ಣು ಸಾಧಿಸಿ ತೋರಿಸಿದ್ದಾಳೆ. ಇಂದು ಹೆಣ್ಣು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಔದ್ಯೋಗಿಕವಾಗಿ ಸಾಕಷ್ಟು ಶಕ್ತಿ ಶಾಲಿಯಾಗಿದ್ದಾಳೆ ..ಇಡಿ ವಿಶ್ವವನ್ನೆ ಸುತ್ತಿ ಬರುವ ಶಕ್ತಿ-ಯುಕ್ತಿಯನ್ನು ಹೊಂದಿರುವ ಸಾಮರ್ಥ್ಯ ಇರುವ ಇಂದಿನ ಹೆಣ್ಣು ಮಕ್ಕಳು ತನ್ನ ಪುಟ್ಟ ಕುಟುಂಬವನ್ನು ಸಲಹುವುದರಲ್ಲಿ ಸೋಲುತ್ತಿದ್ದಾಳೆ!! ಕಾರಣ ಅವರಲ್ಲಿನ ಅಹಂ, ತಾನೇ ಎಲ್ಲಾ ಎನ್ನುವ ಮನೋಭಾವ... ಇದರ ಜೊತೆಗೆ ಕಾನೂನಿನ ಬಲ ಪರಿಣಾಮ ಹಕ್ಕುಗಳನ್ನು ಚಲಾಯಿಸುತ್ತಾ ತನ್ನ ಮೂಲ ಕರ್ತವ್ಯಗಳನ್ನೆ ಮರೆತ್ತಿದ್ದಾಳೆ. ತಾಯಿಯಾಗುವ ಹಕ್ಕು ಇರುವುದು ಹೆಣ್ಣಿಗೆ ಮಾತ್ರ. ಗಂಡು, ವಂಶೋದ್ಧಾರಕ್ಕೆ ಅವಳ ಮೇಲೆ ಅವಲಂಬಿಸಿರುತ್ತಾನೆ. ಹೆರುವುದು ಬಿಡುವುದು ನನ್ನ ಹಕ್ಕು ಎಂದು ಹೆಂಡತಿಯಾದವಳು ವಾದಿಸುವುದು, ಹಕ್ಕನ್ನು ಚಲಾಯಿಸುವುದು ಸರಿಯಲ್ಲ..ಮಗುವನ್ನು ಹೆರುವುದು ತನ್ನ ಕರ್ತವ್ಯ ಎಂದೇ ಆಕೆ ಭಾವಿಸಬೇಕು.ಹೆಣ್ಣಿನ ಬಾಳು ಪೂರ್ಣವಾಗುವುದು ಮಾತೃತ್ವದಲ್ಲಿ ಎಂಬುದು

ಸನಾತನದಿಂದ ಇರುವ ನಂಬಿಕೆ. ಈ ಕಾರಣದಿಂದಲೇ ವಿವಾಹ ವಿಚ್ಛೇದನ ಪಡೆದರು ಮಗು ವಯಸ್ಕನಾಗುವರೆಗೂ ಅದರ ಜವಾಬ್ದಾರಿಯನ್ನು ತಾಯಿಗೇ ನೀಡಲಾಗುತ್ತದೆ.. ಹೊರತು ತಂದೆಗಲ್ಲಾ!!

ಮೊದಲ ಪ್ರಾಮುಖ್ಯತೆ ತಾಯಿಗೆ ಇರುವಂತಹದ್ದು ಮಗುವಿನ ಪಾಲನೆ ,ವಿದ್ಯಾಭ್ಯಾಸಕ್ಕೆ ಗಂಡ (ಮಗುವಿನ ತಂದೆ) ಹಣ ನೀಡಬೇಕು ಎಂಬುದನ್ನು ಕಾನೂನು ಹೇಳುತ್ತೆ,ಅದು ಆತನ ಜವಾಬ್ದಾರಿ ಕೂಡಾ ಆಗಿರುತ್ತೆ. ಪಾಲನೆ ಪೋಷಣೆ ಮಾತ್ರ ತಾಯಿಯದೇ ಆಗಿರುತ್ತೆ. ಆದರೆ ಇಂದು ಬಹುತೇಕ ಹೆಣ್ಣುಮಕ್ಕಳು ತಮ್ಮ ಲೋಲುಪ್ತತೆಯ ಸಲುವಾಗಿ ಗಂಡ ಮತ್ತು ಹೆತ್ತ ಮಕ್ಕಳನ್ನು ಕೊಲ್ಲುವ ಹಂತ ತಲುಪಿದ್ದಾರೆ. ವಿಚ್ಛೇದನ ಪಡೆದು ಮಕ್ಕಳಿದ್ದರೆ ಮರುಮದುವೆ ಕಷ್ಟ ಎನ್ನುವ ಕಾರಣಕ್ಕೆ ಮಕ್ಕಳನ್ನು ಹುಟ್ಟಿಸಿದವನ ಜವಾಬ್ದಾರಿ ಎಂದು ಬೇಕಿದ್ದರೆ ನೀ ಸಾಕು ಎಂದು ತೊರೆದು ಹೋಗುವ ಹೆಣ್ಣು ಮಕ್ಕಳ ಸಂಖ್ಯೆಯೂ ದಿನೇ ದಿನೇ ಹೆಚ್ಚುತ್ತಿದೆ. ಸಂಸಾರ ಬೇಡಾ, ಗಂಡ–ಗಂಡನಮನೆಯವರು ಬೇಡಾ.. ಹಕ್ಕನ್ನು ಚಲಾಯಿಸಿ ಜೀವನಾಂಶ ರೂಪದಲ್ಲಿ ಗಂಡನಿಂದ ಬರುವ ಲಕ್ಷ– ಕೋಟಿಗಟ್ಟಲೆ ಹಣ–ಆಸ್ತಿ ಮಾತ್ರ ಬೇಕು, ಮರುಮದುವೆ ಆದರೂ ಅದನ್ನು ಮರೆಮಾಚಿ ಮೊದಲ ಪತಿಯಿಂದ ಜೀವನಪರ್ಯಂತ ಜೀವನಾಂಶದ ರೂಪದಲ್ಲಿ ಪತಿಯನ್ನು ಪೀಡಿಸುವರು ಇದ್ದಾರೆ, ಜೀವನಾಂಶದ ಪರಿಹಾರಕ್ಕೆ ಮಾತ್ರಮದುವೆ ,ವಿಚ್ಛೇದನ, ಅನ್ನುವ ಹಾಗಾಗಿದೆ. ತವರಿನಲ್ಲಿ ತಂದೆ, ಅಣ್ಣ, ತಮ್ಮಂದಿರು ಮಾಡಿದ ಸಾಲ , ತಂದೆ–ತಾಯಿಯನ್ನು ಸಾಕುವ ಬಾಧ್ಯತೆ, ನಿರ್ವಹಿಸುವ ಜವಾಬ್ದಾರಿಗಳು ಬೇಡಾ ತವರಿನ ಆಸ್ತಿ ಮಾತ್ರ ಬೇಕು. !!

ಹೀಗೆ ಹತ್ತು ಹಲವು ವಿಷಯಗಳ ಮೇಲೆ ಸಂಸ್ಕಾರ ಸಂಸ್ಕೃತಿಯನ್ನು ಮಕ್ಕಳಿಗೆ ತಿಳಿಸಬೇಕಾದ ತಾಯಿಯೇ ತಮ್ಮ ಹಕ್ಕು ಚಲಾಯಿಸುತ್ತ ಮೂಲಭೂತವಾದ ಕನಿಷ್ಠ ಕರ್ತವ್ಯಗಳನ್ನೆ ಮರೆತರೆ ಮುಂದಿನ ಪೀಳಿಗೆಗೆ ಕೌಟುಂಬಿಕ ವ್ಯವಸ್ಥೆ ಬುಡಮೇಲು ಆಗುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ... ಹಾಗಾಗಿ ಹೊಂದಾಣಿಕೆ ಮಾಡಿಕೊಂಡು ತನ್ನ ಕರ್ತವ್ಯವನ್ನು ಸಮರ್ಪಕವಾಗಿ ನಿಭಾಯಿಸಿದ್ದಾದ್ದಲ್ಲಿ ಅವಳ ಹಕ್ಕುಗಳು ಯಾವಾಗಲೂ ಅವಳೊಂದಿಗೆ ಇರುತ್ತವೆ..

ಯಂತ್ರಗಳ ಮೇಲೆ ಹೆಚ್ಚು ಅವಲಂಬನೆ, ಆರ್ಡರ್ ಮಾಡಿ ತರಿಸುವ ಅಡುಗೆ, ಉರಿಯದ ಒಲೆ, ಹೊತ್ತೊತ್ತಿಗೆ ಬೇಯದ ಅನ್ನ, ಟಿವಿ, ಮೊಬೈಲ್ಗಳಲ್ಲಿ ಮುಳುಗಿ ಮಕ್ಕಳನ್ನು  ಅಡಿಕ್ಟ್ ಮಾಡಿ ಸಂಸ್ಕಾರ ಸಂಸ್ಕೃತಿಯ ಅರಿವು ಮೂಡಿಸುವಲ್ಲಿ ಎಡವುದರ ಜೊತೆಗೆ ಪಬ್ , ಪಾರ್ಟಿ ಪ್ರತಿಷ್ಠೆಯ ವಿಷಯವಾಗಿಸಿ ಮಕ್ಕಳ ಸಾಂಸಾರಿಕ ಬದುಕನ್ನೇ ಕಸಿಯುವಷ್ಟು ಬದಲಾಗಿ ಹೋಗಿದ್ದಾಳೆ ಹೆಣ್ಣು. ಇದರ ಪರಿಣಾಮವಾಗಿ ಲಿವಿಂಗ್ ರಿಲೇಶನ್, ಗಂಡು ಗಂಡನ್ನು , ಹೆಣ್ಣು ಹೆಣ್ಣನ್ನೆ

ವಿವಾಹ ವಾಗುವಂತಹ ಘಟನೆಗಳು ನಮ್ಮ ನಿಮ್ಮೆಲ್ಲರ ಮುಂದೆ ಕಾಣಸಿಗುತ್ತಿವೆ .. ಆಧುನಿಕತೆಯ ಭರಾಟೆಯಲ್ಲಿ ಇಂತಹ ವಿಚಾರಗಳೇ ಮುಂದುವರಿದಾಗ ಸೃಷ್ಟಿಯ ಸಮತೋಲನ ಹೇಗೆ ಸಾಧ್ಯ? ಆದರಿಂದ ಆಗುವ ಅನುಕೂಲಗಳಗಿಂತ ಅನಾಹುತಗಳೇ ಹೆಚ್ಚಲ್ವಾ..? ಹೆಣ್ಣಿಗೆ ಇರುವಷ್ಟು ಶಕ್ತಿ ಯಾರಿಗೂ ಇಲ್ಲ, ಅವಳು ಮನಸ್ಸು ಮಾಡಿದ್ರೆ ಏನು ಬೇಕಾದರೂ ಸಾಧಿಸಬಲ್ಲಳು .. ಹಾಗಾಗಿ ಅವಳ ಯುಕ್ತಿ ಮತ್ತು ಶಕ್ತಿ ಯಾವಾಗಲೂ ಒಳ್ಳೆಯದಕ್ಕೆ ಬಳಕೆಯಾಗಲಿ, ಹಕ್ಕು ಚಲಾಯಿಸುವ ಬದಲು ಸರಿಯಾಗಿ ತನ್ನ ಕರ್ತವ್ಯ ನಿಭಾಯಿಸಿದಾಗ ಹೆಣ್ತನಕ್ಕೆ ಒಂದು ಬೆಲೆ ...

ನನ್ನೆಲ್ಲಾ ಸ್ತ್ರೀ ಕುಲದ ಸ್ತ್ರೀ ರತ್ನಗಳಗೆ ಮಹಿಳಾ ದಿನಾಚರಣೆ ಶುಭಾಶಯಗಳು

ಸಾಹಿತ್ಯ ಪತ್ರಿಕೆಗೆ ನನ್ನನ್ನು ಅತಿಥಿ ಸಂಪಾದಕಿಯಾಗಿ ಆಹ್ವಾನಿಸಿದ್ದಕ್ಕೆ ಧನ್ಯವಾದಗಳು, ಶ್ರೀಗಂಧ ಪತ್ರಿಕೆಯ ಮೂಲಕ ಬರಹಗಾರರಿಗೆ ವೇದಿಕೆ ಒದಗಿಸುತ್ತಿರುವುದು ಶ್ಲಾಘನೀಯ.

ಪವಿತ್ರ ಹೆತ್ತೂರು
ವಕೀಲರು

# ಒಳನೋಟ

# ಕಲಿಯುಗದ ಕಾಲಚಕ್ರ..



ರಂಜಿತ ಜಿ ಎಸ್



ಎಲೆ ಮಾನವನೆ ನಿನ್ನ ಕಣ್ಣಿಗೆ ಕಾಣದೆ
ಕಲಿಯುಗದಂತ್ಯವ ಕೇಳು
ಕಲಿಯುಗದಂತ್ಯವು ಕಣ್ಣಿಗೆ ಕಾಣದೆ
ಎಲೆ ಮಾನವನೆ ನೀನು ಕೇಳು

ಶಿರಬಾಗಿ ಶರಣೆಂಬ ಶರಣರ ಚರಣವ
ಮರದಂತೆ ಕಡಿವಾರು ಕೇಳು
ಹರನಡಿ ಪಾದದ ಧೂಳಿನ ಧೂಪವು
ನರರಿಗೆ ಶಾಪವು ಕೇಳು

ಹಾಲುಂಡ ತವರೀಗೆ ತೊಟ್ಟೀಲ ಸೀರೆಯೇ
ಶೂಲದ ಹಗ್ಗವು ಕೇಳು
ಏಳೂರ ರಾಜರು ಸಿರಿಯೆಲ್ಲ ಬರಿದಾಗಿ
ಆಳಂತೆ ದುಡಿವಾರು ಕೇಳು

ಹಸುವಿನ ಕೆಚ್ಚಲು ಹಾವಿನ ವಿಷವಾಗಿ
ಮಸಣದ ಹಾದಿಯು ಕೇಳು
ಹಸಿರುಟ್ಟ ಭೂದೇವಿ ತನ್ನೊಡಲೆ ಬಗೆದು
ಎಸೆವಾಳು ಗುಂಡಿಗೆ ಕೇಳು.

ooo

# ಶಿಶುಗೀತೆ – ಬಣ್ಣದ ಚಿಟ್ಟೆ



ಭಾರ್ಗವಿ ಜೋಶಿ

ಮೊಟ್ಟೆ ಇಟ್ಟ ಚಿಟ್ಟೆ ಮರಿಯು
ತುತ್ತು ಕೊಡಲು ತಿಳಿಯದೇನೆ
ತಾಯಿ ಹಾರೈಕೆ ಮಾತ್ರ ಕೊಟ್ಟು
ಹಾರಿ ಹೋಯಿತು

ಮೊಟ್ಟೆ ಒಡೆದು ಆಚೆ ಬಂದು
ಹಸಿರು ಎಲೆಗಳನ್ನೇ ತಿಂದು
ತಾನು ಯಾರು ಎಂದು ತಿಳಿಯದೆ
ತನ್ನ ಹುಡುಕಿತು

ಸಣ್ಣದೊಂದು
ಹುಳುವು ಆಗಿ
ಸುಮ್ಮನೆ ಆಕಡೆ
ಈ ಕಡೆ ತೆವಳಿ
ದಿನವ ಕಳೆಯಿತು

ತನ್ನ ತಾನು ಕಂಡು ಕೊಳ್ಳಲು
ತನ್ನ ಸುತ್ತ ತಾನೇ ಸುತ್ತಿ
ಬೇಲಿ ಕಟ್ಟಿ ಒಳಗೆ ಕುಳಿತು
ತಪವ ಮಾಡಿತು

ದಿನವಕಳೆದು ಶಕ್ತಿ ಪಡೆದು
ಆಚೆ ಜಗವ ನೋಡಿ ನಿಂದು
ಒಟ್ಟು ಗೂಡಿಸಿ ಎಲ್ಲ ಬಲವ
ರೆಕ್ಕೆ ಬಿಚ್ಚಿತು

ಹಾರುತಿತ್ತು ಹಾರುತಿತ್ತು
ಬಣ್ಣ ಬಣ್ಣದ ರೆಕ್ಕೆ ತೊಟ್ಟು
ಮುಗಿಲ ಮುಟ್ಟೋಕನಸ ಹೊತ್ತು
ಹಾರುತಿತ್ತು ಹಾರುತಿತ್ತು

ಮೊಟ್ಟೆ ಇಂದ ಚಿಟ್ಟೆ ವರೆಗೂ
ದಾರಿ ಸುಗಮವಲ್ಲ
ಆದರೂನು ಛಲವ ಬಿಡದೆ
ಚಿಟ್ಟೆ ಹಾರಿತಲ್ಲ.

OOO

# ಹಸಿರೇ ಉಸಿರು



ಸತೀಶ್ ಹಿರೇಮಠ್

ಬೇವಿನ ನೆರಳಿಲ್ಲ ಬಿರು ಬೇಸಿಗೆಯಲಿ
ಎಲ್ಲೆಲ್ಲಿಯೂ ಕಟ್ಟಡಗಳ ಮಹಲುಗಳು
ನಳ ನಳಿಸುವ ಹಸಿರಿನ ನೆರಳನಳಿದು
ಸುಡುವ ಕಲ್ಲಿನ ಮನೆಯ ನಿರ್ಮಿಸಿದನು

ಮುಂಚೆ ಇತ್ತೊಂದು ಕಿವಿ ಮಾತು ಕೇಳು
ಬ್ಯಾಸಿಗಿ ದಿವಸಕ ಬೇವಿನ ಮರ ತಂಪ
ಈಗ ಬದಲಾಗಿ ಬ್ಯಾಸಿಗಿ ದಿವಸಕ ಎಸಿ
ಫ್ರೀಜ್ ಕೂಲರಗಳೆ ತಂಪ ಮನಿಯಾಗ

ನೆರಳು ಅಳಿದು ಮಳೆಯ ಬಯಸುತಿಹರು
ಧರೆಯ ತಣಿಸುವುದೆ ಮುನಿದ ಮಳೆಯು
ಈಗಲಾದರೂ ನೆಡು ನೀ ಗಿಡವ ಮನುಜ
ಭವಿಷ್ಯದ ಮಗುವಿಗೆ ನೀಡಲಿ ಉಸಿರು.



oooo

# ನಾನೆಷ್ಟು ಸುಖಿ



ಸುಜಾತ ರವೀಶ್

ಜೀವನವಿದು ಸುಖ ದುಃಖಗಳ ಮಿಶ್ರಣ, ನೋವು ನಲಿವು ನೋವುಗಳ ಪರಿಭ್ರಮಣ, ಶೋಕ ಸಂತೋಷಗಳ ರಸಾಯನ. ಅವರ ಆಯ್ಕೆಗೇ ಬಿಟ್ಟರೆ ಸಂತೋಷವೇ ಬೇಕು ಸರ್ವರಿಗೂ, ಕೇಳದಿದ್ದರೂ ಸಂಕಟ ಕೊಟ್ಟೇ ಕೊಡುತ್ತಾರೆ ಭಗವಂತ ಹೀಗಾಗಿ. ಈ ಚಕ್ರದ ಸುತ್ತಾಟದಲ್ಲೇ ಸವೆಸಬೇಕು ಬಾಳು ಆದರೆ ಅದರ ಜೊತೆಗೆ ಸವಿಯನ್ನು ಸವಿಯುವುದೇ ಜೀವನದ ಅರ್ಥ ಗಮ್ಯ. ಜೀವನದ ಈ ಯಾನದಲ್ಲಿ ಗಮ್ಯ ಮುಖ್ಯವಲ್ಲ ಸಾಗುವ ಹಾದಿ ರೀತಿನೀತಿ ಮುಖ್ಯ .

ಹಾಗಾದರೆ ಸುಖ ಎಂದರೇನು? ಯಾರೊಬ್ಬರ ಊಹೆಯ ಮಿತಿಯಲ್ಲಿರದ, ವ್ಯಕ್ತಿಯಿಂದ ವ್ಯಕ್ತಿಗೆ ಅಷ್ಟೇ ಏಕೆ ಒಬ್ಬನೇ ವ್ಯಕ್ತಿಯಲ್ಲೂ ಕಾಲದಿಂದ ಕಾಲಕ್ಕೆ ಸ್ಥಳದಿಂದ ಸ್ಥಳಕ್ಕೆ ಬದಲಾಗುವ ಚಂಚಲ ಭಾವವಿದು. ಜೀವನದಲ್ಲಿ ಕಷ್ಟಗಳೇ ಇರದ ಪರಿಪೂರ್ಣ ಸುಖಿ ಯಾರೊಬ್ಬರೂ ಇಲ್ಲ. ಕಡಿಮೆ ಕಷ್ಟದವರು ಸುಖಿಗಳು ಎನ್ನಬಹುದು ಬೇಕಾದರೆ. ದೈಹಿಕ ಶ್ರಮವಿಲ್ಲದ ಬದುಕು ಸುಖವೇ ? ಕಠಿಣ ಶ್ರಮದಿಂದ ಬದುಕು ದೂಡುವವನಿಗೆ ಹಾಗೆನಿಸಬಹುದು, ಶ್ರೀಮಂತ ಸುಖಿಯೆಂದು ಬಡವ ಭಾವಿಸಬಹುದು, ತಮಗೆ ಲಭ್ಯವಿರದ ಇನ್ನೊಂದನ್ನು ಹೊಂದಿರುವವನು ಸುಖಿ ಎಂದು ಅರ್ಥೈಸಬಹುದು. ಹೀಗಾಗಿ ಸುಖಕ್ಕೆ ಸರಿಯಾದ ಅರ್ಥ ವ್ಯಾಖ್ಯಾನ ಕೊಡಲು ಸಾಧ್ಯವಿಲ್ಲ . ಕಷ್ಟದ ನಂತರ ಬರುವ ಸುಖಕ್ಕೆ ಬೆಲೆ ಹೆಚ್ಚು ಅದನ್ನು ಸಂಸ್ಕೃತ ಸುಭಾಷಿತ ಹೀಗೆ ಹೇಳಿದೆ

ಯದೇವೋಪನತಃ ದುಃಖಾತ್ ಸುಖಮ್ ತದ್ರಸವತ್ತರಮ್
ನಿರ್ವಾಣಾಯ ತರುಚ್ಛಾಯಾ ತಪ್ತಸ್ಯ ಹಿ ವಿಶೇಷತಃ

ಕಷ್ಟವನ್ನನುಭವಿಸಿದ ಮೇಲೆ ಬರುವ ಸುಖವು ಬಹಳ ರುಚಿಯಾಗಿರುತ್ತದೆ. ಬಿಸಿಲಿನಲ್ಲಿ ನಡೆದು ಬಳಲಿದ ದಾರಿಗನಿಗೆ ಮರದ ನೆರಳು ಹೆಚ್ಚು ತಂಪನ್ನು ಕೊಡುತ್ತದೆ. ಮೊದಲಿನಿಂದ ಮರದ ನೆರಳಲ್ಲಿ ಇರುವವನಿಗೆ ಅದರ ಅಗತ್ಯತೆ ಉಪಯುಕ್ತತೆಯ ಅರಿವು ಇರುವುದಿಲ್ಲ. ಬಿಸಿಲಲ್ಲಿ ದೂರದಿಂದ ನಡೆದು ಬಂದವನಿಗೆ ಮರದ ನೆರಳು ಹೆಚ್ಚು ಆಪ್ಯಾಯಮಾನವೆನಿಸುತ್ತದೆ. ಹೀಗೆ ಇರುವ ಸೌಕರ್ಯಗಳಿಗೆ ಒಗ್ಗಿರುವವರು ಅದು ಸಾಮಾನ್ಯವೆಂದುಕೊಂಡು ನಂತರ ಅದರ

ಅನುಪಸ್ಥಿತಿಯಲ್ಲಿ ಅವಶ್ಯಕತೆ ಮನಗಂಡ ಮೇಲೆ ಮತ್ತೆ ಪಡೆದಾಗ ಹೆಚ್ಚು ಸುಖ ಅನುಭವಿಸುವಂತೆ.

ಸುಖಗಳು ಭೌತಿಕ, ಮಾನಸಿಕ, ಆಧ್ಯಾತ್ಮಿಕ ಯಾವ ಬಗೆಯದಾದರೂ ಆಗಬಹುದು. ಭೌತಿಕ ವಸ್ತುಗಳು ತಂದುಕೊಡುವ ಅನುಕೂಲತೆಗಳು, ಪ್ರೀತಿಪಾತ್ರರಿಂದ ಕುಟುಂಬ ಸ್ನೇಹಿತ ಸಮಾಜದಿಂದ ಸಿಗುವ ಪ್ರೇಮ ಆದರ ಮನ್ನಣೆಗಳು, ತನ್ನೊಳಗೆ ಆತ್ಮ ಸಂತೋಷ ಪಡುವ ಆಧ್ಯಾತ್ಮಿಕ ಸುಖವಾಗಿರಬಹುದು ಎಲ್ಲವೂ ಸುಖದ ವಿವಿಧ ಮಜಲುಗಳು. ಎಲ್ಲವೂ ಅನಿವಾರ್ಯವೇ ಆಶಿತವೇ ಅಪೇಕ್ಷಿತವೇ. ಜೀವನದ ಒಂದೊಂದು ಸಮಯದಲ್ಲಿ ಒಂದೊಂದರ ಅವಶ್ಯಕತೆ ಮನಸ್ಸಿಗೆ ಹೆಚ್ಚು . ಹಾಗೆಂದು ಯಾವುದೋ ಕನಿಷ್ಟವೂ ಅಲ್ಲ ಗರಿಷ್ಠವೂ ಅಲ್ಲ . ಬರೀ ತ್ಯಾಗವೇ ತುಂಬಿರುವ ಬಾಳು ಸಹನೀಯವಲ್ಲ ,ಬರಿ ಭೋಗ ವ್ಯಕ್ತಿಗೆ ಶೋಭೆಯಲ್ಲ. ತ್ಯಾಗ ಭೋಗಗಳ ಹಿತಮಿತ ಸಂಗಮದ ಸಮನ್ವಯದ ಬದುಕು ವ್ಯಕ್ತಿ ಹಾಗೂ ಸಮಾಜದ ಆರೋಗ್ಯಕರ ಸುಸ್ಥಿತಿಗೆ ಸಹಾಯಕ .ನಮಗೂ ಅಷ್ಟೆ ತಾನೆ ಬಾಲ್ಯದಲ್ಲಿ ಭೌತಿಕ ಸುಖದ ಹಂಬಲ, ಯೌವ್ವನ ನಡುಹರೆಯ ಗಳಲ್ಲಿ ಪ್ರೀತಿವಾತ್ಸಲ್ಯಗಳ ಮೇಲೆ ಅವಲಂಬನೆ, ಬದುಕಿನ ಮುಸ್ಸಂಜೆಯ ದಿನಗಳಲ್ಲಿ ಆಧ್ಯಾತ್ಮಿಕ ಸುಖದ ಹುಡುಕಾಟ . ಇದು ಮಾನವ ಬದುಕಿನ ನೇರ ಸರಳ ಆಯಾಮ ನಿಯಮ. ಕೆಲವೊಮ್ಮೆ ಒಂದೊಂದು ಸಾರಿ ಈ ಸುಖಗಳ ಅನುಕ್ರಮಣಿಕೆ ಹಿಂಚು
ಮುಂಚು ಆಗಬಹುದು.

ಇನ್ನು ಕವಿ ಕಾವ್ಯದಲ್ಲಿ ಸುಖದ ಪರಿಕಲ್ಪನೆಯ ಬಗ್ಗೆ ಕೊಂಚ ಗಮನ ಹರಿಸೋಣ ಸರ್ವಜ್ಞನ ಮಾತುಗಳಲ್ಲಿ ಹೇಳುವುದಾದರೆ

ಬೆಚ್ಚನೆಯ ಮನೆಯಿರಲು ವೆಚ್ಚಕ್ಕೆ ಹೊನ್ನಿರಲು ಇಚ್ಛೆಯನರಿವ ಸತಿಯಿರಲು
ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ

ಮೂಲಭೂತ ಅಶನ ವಸನ ಸಾಂಗತ್ಯಗಳಿದ್ದರೆ ಸ್ವರ್ಗ ಎನ್ನುವುದು ಇಲ್ಲೇ ಕಾಣಬಹುದು ಎನ್ನುತ್ತಾನೆ ಸರ್ವಜ್ಞ .ಇಲ್ಲಿ ಭೌತಿಕ ಹಾಗೂ ಮಾನಸಿಕ ಸುಖಗಳ ಸುಂದರ ವರ್ಣನೆಯನ್ನು ಕಾಣಬಹುದು.

ಮುಂದೆ ನಮ್ಮ ಜಿ ಪಿ ರಾಜರತ್ನಂ ಅವರು ಹೇಳೋದನ್ನ ಕೇಳೋಣ ಬನ್ನಿ

ಹೇಳ್ಕೊಳೋಕೊಂದೂರು ತಲೆಮ್ಯಾಗೆ ಒಂದ್ಸೂರು
ಮಲಗಾಕೆ ಭೂಮ್ತಾಯಿ ಮಂಚ
ಕೈಹಿಡಿದೋಳ್ ಪುಟ್ನಂಜಿ ನಗ್ ನಗ್ತಾ
ಉಪ್ಗಂಜಿ ಕೊಟ್ರಾಯ್ತು ರತ್ನನ್ ಪರ್ಪಂಚ

ಸುಖದ ಜೀವನಕ್ಕೆ ತೀರಾ ಬೇಕಾದಷ್ಟು ಇದ್ದರೆ ಸಾಕು. ತಲೆ ಮೇಲೆ 1 ಸೂರು ಅರಮನೆಯೇ ಬೇಕಿಲ್ಲ, ಗುಡಿಸಲಾದರೂ ನಡೆದೀತು ಮಲಗಲಿಕ್ಕೆ ಹಂಸತೂಲಿಕಾತಲ್ಪ ಬೇಡವೇ ಬೇಡ,ನೆಲದ ಮೇಲೆ ಮಲಗಿದರೆ ಆಯಿತು,ಊಟಕ್ಕೆ ಮೃಷ್ಟಾನ್ನ ಭೋಜನವೇನೂ ಬೇಡ ಉಪ್ಪು ಹಾಕಿದ ಗಂಜಿ ಸಾಕು ಆದರೆ ಅದನ್ನು ಕೊಡುವ ನಂಜಿ ಮಾತ್ರ ನಗುನಗುತ್ತಾ ಕೊಡಬೇಕು ಅಷ್ಟೆ .ಅಲ್ಲಿಗೆ ರತ್ನನ ಪ್ರಪಂಚ ಸುಖಮಯ . ಇಲ್ಲಿ ಭೌತಿಕ ಸುಖಗಳು ಕಡಿಮೆಯಾದರೂ ಚಿಂತೆಯಿಲ್ಲ ಮಾನಸಿಕವಾಗಿ ಶ್ರೀಮಂತರಾಗಿರಬೇಕು ಎಂಬ ಭಾವ ಒಡಮೂಡಿವೆ. ಸರ್ವಜ್ಞನಾಗಲಿ ರಾಜರತ್ನಂ ಅವರಾಗಲಿ ದಾಂಪತ್ಯದ ಸಾಮರಸ್ಯ ಭಾವಕ್ಕೆ ಹೆಚ್ಚು ಒತ್ತುಕೊಡುತ್ತಾರೆ. ಇಂದಿನ ಸಮಾಜ ಭೌತಿಕವಾಗಿ ಹಣಗಳಿಸುವ ಓಟದ ಸ್ಪರ್ಧೆಗೆ ಬಿದ್ದು ಈ ಮೂಲಭೂತ ಅವಶ್ಯಕತೆಯನ್ನೇ ಮರೆಯುತ್ತಿದ್ದಾರೆ ಅಂತ ಸಹಜವಾಗಿಯೇ ಅನ್ನಿಸುತ್ತಿದೆ .

ಇವು ಭಾರತೀಯ ಕನ್ನಡದ ಕವಿ ಅವಲೋಕನವಾದರೆ ಉಮರನ ಒಸಗೆ ಯಲ್ಲಿ ಏನಿದೆ ನೋಡೋಣ.

ಅಲ್ಲಿ ಮರದಡಿಯಲ್ಲಿ ನಲ್ಗಾವ್ಯವೊಂದಿರಲು
ರೊಟ್ಟಿಯಲಿನಿಸೊಂದು ಕುಡಿಕೆಯಲಿ ಮಧುವು
ಮೇಣ್ ಮುಗುದೆ ನೀ ಕುಳಿತು ಪಾಡಲಹ
ಕಾಡಾದೊಡೇನದುವೆ ಸಗ್ಗ ಸುಖವೆನಗೆ

ಇಲ್ಲಿ ಕವಿಗೆ ಮನೆ ಸಹ ಬೇಕಿಲ್ಲ ಮರದ ನೆರಳೇ ಸಾಕು ಹೊಟ್ಟೆಗೆ ರೊಟ್ಟಿ ಭೌತಿಕ ದೇಹ ಸ್ವಲ್ಪ ರಸಿಕತೆಗೆ ಒಂದಷ್ಟು ಮಧು ಸಖಿಯ ಸಂಗೀತ ಇಷ್ಟಿದ್ದರೆ ನಗರ ಜೀವನವೂ ಬೇಡ ಕಾಡೂ ಸ್ವರ್ಗವೆಂದೇ ಅನಿಸುತ್ತಂತೆ.

ಹೀಗೆ ಸುಖದ ಪರಿಕಲ್ಪನೆಗಳನ್ನು ವೀಕ್ಷಿಸುತ್ತಾ ನಡೆದರೆ "ಸಾಕು ಎಂದರೆ ಶ್ರೀಮಂತ ಬೇಕು ಎನ್ನುವವ ಬಡವ" ಎಂಬ ಮಾತು ನೆನಪಿಗೆ ಬರುತ್ತದೆ. ಇರುವಷ್ಟಕ್ಕೇ ತೃಪ್ತಿಪಡುವ ಮನೋಭಾವವಿದ್ದು ಅತಿಯಾದ ಬಯಕೆಗಳ ಗುಲಾಮರಾಗದೆ ಹೋದರೆ ಅದುವೇ ಸುಖ. ಇಷ್ಟು ದೊರಕಿದರೆ ಮತ್ತಷ್ಟರಾಸೆ ಎಂದು ಕಾಮನೆಗಳ ಪಟ್ಟಿ ಬೆಳೆಸುತ್ತಾ ಹೋದರೆ, ನಿನ್ನೆಯ ಘಟನೆಗಳ ನೆನೆದು ಕೊರಗುತ್ತಾ ಕುಳಿತರೆ, ಮುಂದೆಂದೋ ನಡೆಯುವುದರ ಬಗ್ಗೆ ಹೆದರಿ ಚಿಂತಿಸಿದರೆ ಸುಖ ಖಂಡಿತಾ ಇರದು. ಸಾಕು ಎನ್ನುವ ಸಂತೃಪ್ತಿ ಒಂದಿದ್ದರೆ ಅವನೇ ಪರಮಸುಖಿ. ಕಷ್ಟ ನೋವು ಇದ್ದರೇನೇ ಬಾಳನಲ್ಲಿ ಮಾಗಲು ಸಾಧ್ಯ ಅನುಭವದಲ್ಲಿ ಹಣ್ಣಾಗಲು ಅದುವೇ ಮಾರ್ಗ. ಅದಕ್ಕೆ ಡಿವಿಜಿಯವರು ಮಂಕುತಿಮ್ಮನ ಕಗ್ಗದಲ್ಲಿ ಹೀಗೆ ಹೇಳುತ್ತಾರೆ

ವಹಿಸು ಕೆಲಭಾರಗಳ ಸಹಿಸು ಕೆಲ ನೋವುಗಳ;
ಪ್ರಹರಿಸರಿಗಳನನಿತು ಯುಕ್ತಗಳನರಿತು
ಮಹಿಯ ನಾಟಕದಿ ನೀಂ ಮನಸಿಟ್ಟು ಕುಣಿಕುಣಿದು
ವಿಹರಿಸಾತ್ಮಾಲಯದಿ -- ಮಂಕುತಿಮ್ಮ ॥904॥

ಹೀಗಾಗಿ ಸುಖವೆಂದರೆ ವಸ್ತುಗಳ ಸಂಗ್ರಹ ಅನುಭವವಲ್ಲ ಮನದ ಪರಿಭಾವ ಅವಸ್ಥೆ ಅನುಭಾವ. ದೇವರಿಗೆ ನಮಗೆಷ್ಟು ಕೊಡಬೇಕೆಂದು ಗೊತ್ತು, ಕೊಡುತ್ತಾನೆ ಎಂಬ ಭಾವವಿದ್ದರೆ ಪರಮಸುಖ .ಆಗ ಮಾತ್ಸರ್ಯ ಸಂತಾಪಗಳು ಇರವು. ಕರ್ಮಸಿದ್ಧಾಂತ ಒಂದನ್ನು ನಂಬಿದರೆ ಸಾಕು ಅದೇ ಪರಮೋಚ್ಚ ಸುಖವೀಯುತ್ತದೆ.

ಇದಿಷ್ಟು ಸಾಮಾನ್ಯವಾಗಿ ಸುಖದ ಭಾಷ್ಯಗಳು. ತೀರಾ ವೈಯಕ್ತಿಕ ನೆಲೆಗೆ ಬಂದರೆ ಇಲ್ಲೂ ಮನೋಧರ್ಮದ ಭೂಮಿಕೆಯೇ ಹೆಚ್ಚು ಮಹತ್ತರ . ಒಳ್ಳೆಯ ತಂದೆ ತಾಯಿ ತಂಗಿಯರು ಸುಂದರ ಬಾಲ್ಯ ಒಳ್ಳೆಯ ಶಿಕ್ಷಣ ನಿಜಕ್ಕೂ ಸ್ವರ್ಗಕ್ಕೆ ಕಿಚ್ಚು ಹಚ್ಚುವಂತಹ ಸುಖವೇ ನಂತರ ಮನಮೆಚ್ಚಿದವರೊಡನೆ ಮದುವೆ, ಸುಖವಾಗಿ ಜೀವಿಸಲು ಸಾರ್ಥಕ ಉದ್ಯೋಗ. ಇಲ್ಲಿ ಮಕ್ಕಳಿಲ್ಲದ ಕೊರತೆ ಎದುರಾ ದರೂ ಅದನ್ನೇ ಬೃಹದಾಗಿಸಿ ಕೊರಗದೆ ಮುನ್ನಡೆದಿದೆ ಜೀವನ. ಓದಲು ಕಲಿತ ದಿನದಿಂದ ಈ ಕ್ಷಣದವರೆಗೂ ಸಾಂಗತ್ಯ ನೀಡಿವೆ ಪುಸ್ತಕಗಳು. ಇತ್ತೀಚೆಗೆ ಆರಂಭಿಸಿದ ಬರವಣಿಗೆ ಸಂತಸದ ಸುಖಾನುಭವ ನೀಡಿದೆ ನೀಡುತ್ತಿದೆ . ಸಾಕಿಷ್ಟು ದೇವ ಬೇರೇನನ್ನು ಕೇಳಲಾರೆ. "ಕೊಡುವುದೆಲ್ಲ ಕೊಡುವನವನು ಇನ್ನೂ ಆಸೆಯೇತಕೆ ಎಂಬ ಸಮರ್ಪಣಾ ಭಾವ ಬೆಳೆಸಿಕೊಂಡಿರುವುದರಿಂದ ದೈವದಲ್ಲಿ ಅಪಾರ ನಂಬಿಕೆ ಇರಿಸಿರುವುದರಿಂದ ನಿಜಕ್ಕೂ ನಾನು ತುಂಬಾ ತುಂಬಾ ಸುಖೀನೇ. ಪ ನನ್ನ ನೆಚ್ಚಿನ ಕಗ್ಗದ ಮತ್ತೊಂದು ಉದಾಹರಣೆಯೊಂದಿಗೆ ಈ ಲೇಖನ ಮುಗಿಸುವೆ

ಆರಲೆನ್ನಯ ಹೃದಯ ಕರಣಗಳ ಕಾವುಗಳು
ಸೇರಲೆನ್ನಯ ಜೀವ ವಿಶ್ವಜೀವದಲಿ
ಧಾರುಣಿಯ ಮಡಿಲೆನ್ನ ಕೊಳಲಿ:
ಜಗಮರೆತಿರಲಿ ಹಾರಯಿಸು ನೀನಿಂತು - ಮಂಕುತಿಮ್ಮ ॥920॥

ooo

# ಯುಗಾದಿ



ಅನು ಸತೀಶ್

ಯುಗ ಯುಗಗಳು ಕಳೆದಂತೆ ಹೊಸ ಯುಗವು ಬರುವುದು
ಹೊಸ ವರ್ಷಕೆ ಹೊಸ ಹರ್ಷವ ನೀಡುವುದು

ಚೈತ್ರ ಮಾಸದ ಮೊದಲ ಹಾದಿ
ತಂದಿತು ನವ ಸಂಭ್ರಮದ ಯುಗಾದಿ

ಇರಬೇಕು ಉತ್ಸಾಹ ಉಲ್ಲಾಸದ ಮನಸು
ಸಂವತ್ಸರವು ಬಂದಿದೆ ವಿಶ್ವಾವಸು

ಇದು ತಂದಿಹುದು ಸಿರಿ ಸಂಪತ್ತು
ಸುಖ ನೆಮ್ಮದಿ ಎಲ್ಲರಿಗೂ ಇತ್ತು

ಎಣ್ಣೆ ಅಭ್ಯಂಜನ ಮಾಡೋಣ
ಮಾವಿನ ಬೇವಿನ ತೋರಣ
ಎಲ್ಲರೂ ಸೇರಿ ಕಟ್ಟೋಣ

ಪಂಚಾಂಗ ಶ್ರವಣ
ಪೂಜೆ ಮಂತ್ರ ಪಠಣ

ಬೇವು ಬೆಲ್ಲ, ಒಬ್ಬಟ್ಟಿನ ಸಿಹಿ ಹೂರಣ
ಸಂತೋಷದಿ ಹೊಸ ಬಟ್ಟೆ ಧರಿಸೋಣ

ವಿಶ್ವಾಸವು ತರಲಿ ಧನಾತ್ಮಕ ಬೆಳಕು
ತೊಳೆಯಲಿ ಕಲ್ಮಶ ಕೊಳಕು
ನಮ್ಮೆಲ್ಲರ ಜೀವನ ಆಗಲಿ ಹೊಂಬೆಳಕು

OOO

# ಸ್ಥಳ ಪರಿಚಯ-ಮೂಡ್ಯಾ ಗ್ರಾಮ



ಮಂಜುಳ ಶಶಿಧರ್ ಆಚಾರ್

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ (ಕೋಡಿಯಪ್ಪ) ಮದ್ದೂರು ತಾಲೂಕಿನ ಕೊಪ್ಪ ತಾಲ್ಲೂಕಿನ ಮೂಡ್ಯ ಗ್ರಾಮ ಮದ್ದೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಮೂಡ್ಯಾ ಗ್ರಾಮದ ಉದ್ಭವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ.
ಇವರನ್ನು ಸುತ್ತಾ ಹತ್ತಾರು ಹಳ್ಳಿಯವರು ಕೋಡಿಯಪ್ಪ ಎಂದೂ ಕರೆಯುತ್ತಾರೆ





ಸುಮಾರು ವರ್ಷಗಳ ಹಿಂದೆ ಹರಳೇ ಕೆರೆಯಿಂದ ನೀರು ಪ್ರತೀ ವರ್ಷವೂ ಕೋಡಿ ಹರಿದು ಸುತ್ತ ಹಳ್ಳಿಗಳನ್ನೆಲ್ಲಾ ಮುಳುಗಿಸುತ್ತಿತ್ತಂತೆ.

ಸುತ್ತ ಮುತ್ತ ಇರುವ ಹಳ್ಳಿಗರು ತಮ್ಮ ಮನೆ ಬೆಳೆಗಳನ್ನು ಕಳೆದುಕೊಂಡು ತುಂಬಾ ತೊಂದರೆ ಅನುಭವಿಸುತ್ತಿದ್ದರಂತೆ. ಆಗ ಅಲ್ಲಿ ದಡದಲ್ಲಿದ್ದ ಅಂಕೋಲೆ ಮರ ಮಾತ್ರ ಕೋಡಿ ಬಂದರೂ ಜಗ್ಗದೇ ನಿಂತಿದ್ದನ್ನು ನೋಡಿ ಜನರು ಅದಕ್ಕೆ ನೀನು ಕೋಡಿ ಹರಿಯುವುದು ನಿಲ್ಲಿಸಿದರೆ ಸುತ್ತಲೂ ಇರುವ ಹಳ್ಳಿಯವರೆಲ್ಲ ಯಾವುದೇ ಗ್ರಾಮ ದೇವರ ಪೂಜೆ ಉತ್ಸವ ಶುಭ

ಕಾರ್ಯಗಳು ನಡೆದರೂ ಮೊದಲು ನಿನ್ನ ಅಪ್ಪಣೆ ಪಡೆದು ನಂತರ ಮುಂದಿನ ಕಾರ್ಯಗಳನ್ನು ಮಾಡುತ್ತೇವೆ ಎಂದು ಹೇಳಿ ನಮಸ್ಕಾರ ಮಾಡಿ ಹೋದರಂತೆ .

ಬೆಳಗ್ಗೆ ಎದ್ದು ನೋಡಿದರೆ ಮರದ ಕೆಳಗೆ ಶಿವಲಿಂಗ ಉದ್ಭವಿಸಿತ್ತಂತೆ.
ಅಂದಿನಿಂದ ಎಷ್ಟೇ ಮಳೆ ನೀರು ಬಂದರೂ ಸ್ವಾಮಿಯನ್ನು ದಾಟಿ ಒಂದು ಹನಿ ನೀರೂ ಬರುವುದಿಲ್ಲ. ಕೋಡಿ ಹರಿದರೂ ಎಲ್ಲಿ ಹೋಗುವುದು ಎಂದು ಯಾರಿಗೂ ತಿಳಿದಿಲ್ಲ. ನಂತರ ಸ್ವಾಮಿಗೆ ದೇವಸ್ಥಾನ ಕಟ್ಟಿಸಲು ಮುಂದಾದಾಗ ಪಾಯಕ್ಕೆ ಇಡುತ್ತಿದ್ದ ಕಲ್ಲುಗಳೆಲ್ಲವೂ ಬಿದ್ದು ಹೋಗುತ್ತಿದ್ದವಂತೆ ಇದರ ಮಹಿಮೆ ತಿಳಿದು ಶ್ರೀ ಸಿದ್ದಲಿಂಗ ಗುರುಗಳು ಇಲ್ಲಿ ಬಂದು ಸ್ವಾಮಿಯ ದರ್ಶನ ಮಾಡಿ ಕೇಳಿದಾಗ ಸ್ವಾಮಿಗೆ ಪ್ರಕೃತಿಯ ಮಡಿಲಲ್ಲಿ ಇರುವಾಸೆ ಹಾಗಾಗಿ ಯಾರೂ ಅವರ ಇಷ್ಟಕ್ಕೆ ವಿರುದ್ಧವಾಗಿ ದೇವಸ್ಥಾನವಿರಲಿ ಅವರ ಅಪ್ಪಣೆ ಇಲ್ಲದೆ ಒಂದು ಕಲ್ಲೂ ಸಹ ಇಡುವ ಹಾಗಿಲ್ಲವೆಂದು ಕೆರೆಯಲ್ಲಿ ಸಿಕ್ಕಿದ ಬಂಡೆ ಕಲ್ಲಿನಲ್ಲಿ ಸಗಣಿಯನ್ನು ಬೆರೆಸಿ ಚಿಕ್ಕದಾಗಿ ಗುಡಿಯ ತರ ಇರಿಸಿದರಂತೆ. ಅಂದಿನಿಂದ ಇಂದಿನವರೆಗೂ ಆ ಗುಡಿ ಹಾಗೇ ಇದೆ. ಶ್ರೀ ಸಿದ್ದಲಿಂಗ ಗುರುಗಳು ಪೂಜಿಸಿ ಆರಾಧಿಸಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಎಂದು ಕರೆದರೆಂದು ಪ್ರತೀತಿ ಇದೆ. ಗಂಗೆಯ ದಡದಲ್ಲಿ ಯಾವುದೇ ಆಧುನಿಕ ಪ್ರಪಂಚದ ಜಂಜಾಟವಿಲ್ಲದೇ ಸುಂದರ ಹಳ್ಳಿಯ ಪರಿಸರದ ಸ್ವಾಮಿಯ ಸನ್ನಿಧಾನವನ್ನು ಬಿಟ್ಟು ಬರಲು ಮನಸ್ಸೇ ಬರುವುದಿಲ್ಲ.

ಈಗಲೂ ಸ್ವಾಮಿಗೆ ತೆಂಗಿನ ಕಾಯಿ ಒಡೆಯುವುದಿಲ್ಲ. ಹಣ್ಣು ಮುರಿಯುವುದಿಲ್ಲ ಹಾಗೇ ಇಟ್ಟು ತರುವುದು ವಾಡಿಕೆ. ಈಗಲೂ ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ದೇವರ ಪೂಜೆ ಉತ್ಸವ ಶುಭ ಕಾರ್ಯಗಳು ನಡೆಯುವ ಮೊದಲು ಕೋಡಿಯಪ್ಪನ ಅಪ್ಪಣೆ ಪಡೆದು ನಂತರ ಮುಂದಿನ ಕಾರ್ಯಗಳನ್ನು ನಡೆಸುತ್ತಾರೆ.

ಅಂಕೋಲೆ ಹಾಗೂ ಬಿಲ್ವಪತ್ರೆ ಮರದ ಕೆಳಗೆ ಸ್ವಯಂ ಉದ್ಭವಿಸಿದ ಶ್ರೀ ಸಿದ್ಧಲಿಂಗೇಶ್ವರ ಅಥವಾ ಕೋಡಿಯಪ್ಪ ಎಂದು ಕರೆಸಿಕೊಳ್ಳುವ ಕ್ಷೇತ್ರ ಇರುವುದು ಮದ್ದೂರು ತಾಲೂಕಿನ ಬೆಸಗರ ಹಳ್ಳಿಗೆ ಹೋಗುವ ದಾರಿಯಲ್ಲಿ ಕೊಪ್ಪ ಗ್ರಾಮದ ಮೂಡ್ಯಾ ಎಂಬ ಸುಂದರ ಹಳ್ಳಿಯ ಕೆರೆಯ ದಡದಲ್ಲಿ ಇದೆ.

ರಾಜ್ಯದ ಮೂಲೆ ಮೂಲೆಗಳಿಂದ ಭಕ್ತರು ಆಗಮಿಸುತ್ತಾರೆ. ತಮ್ಮ ಬೇಡಿಕೆಗಳನ್ನು ಸ್ವಾಮಿಯ ಮುಂದೆ ಇಟ್ಟು ಹರಕೆಗಳನ್ನು ಕಟ್ಟುತ್ತಾರೆ. ನೆಲದಲ್ಲಿ ಅನ್ನ ಉಣ್ಣುವುದು, ಮಂಡಲದ ಸ್ವಾಮಿಯ ಅಭಿಷೇಕದ ನೀರು ಹಾಕಿಸಿಕೊಳ್ಳುವುದು ಹೀಗೇ ಮುಂತಾದ ಸೇವೆಗಳನ್ನು ಮಾಡುತ್ತಾರೆ.

ಶಿವರಾತ್ರಿಯಂದು ಕಾರ್ತೀಕ ಮಾಸದಲ್ಲಿ ಸುತ್ತಲೂ ಇರುವ ಹತ್ತಾರು ತಾಲ್ಲೂಕಿನ ಹಳ್ಳಿಗಳ ಜನರು ಇಡೀ ರಾತ್ರಿ ಸ್ವಾಮಿಗೆ ಲಕ್ಷ ದೀಪಗಳನ್ನು ಬೆಳಗಿಸುವಾಗ ಇಡೀ ಹಳ್ಳಿಯೇ ದೀಪದ ಬೆಳಕಿನಲ್ಲಿ ಕಂಗೊಳಿಸುವಾಗ ತಮಟೆ ನಗಾರಿ ಡೋಲು ಮಂಗಳ ವಾದ್ಯಗಳ

ಮೊಳಗುವಿಕೆಯಿಂದ ಕೈಲಾಸವೇ ಧರೆಗೆ ಇಳಿದಿದೆ ಎನ್ನುವಂತೆ ಶಿವನ ಸನ್ನಿಧಾನ ಮೈ ಮನಗಳನ್ನು ಮರೆಸುತ್ತದೆ.

ಈಗಿನ ಆಧುನಿಕ ಕಾಲದ ಜಂಜಡದಿಂದ ದೂರವಾಗಿ ನಿರ್ಮಲ ಪಕ್ಕಾ ಹಳ್ಳಿಯ ವಾತಾವರಣದ ಕೆರೆಯ ದಡದಲ್ಲಿ ವಿರಾಜಮಾನರಾಗಿದ್ದಾರೆ ನಮ್ಮ ಮನೆಯ ಕುಲ ದೇವರಾದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಸ್ಥಳೀಯರಿಗೆ ಕೋಡಿಯಪ್ಪ.

ಓಂ ನಮಃ ಶಿವಾಯ

OOO

## ಬೇಕಿತ್ತಾ



ಮಧುಕರ್ ರಾವ್

ಬಾಲ್ಯದಲ್ಲಿ ಬೆಳೀತಾ ತಿಂತಿದ್ ರಾಗಿ ಹುರಿಟ್ಟು,
ಬ್ಯಾಚುಲರ್ ಲೈಫ್ ಅ ತಿಂತಿದ್ದು ಜಾಸ್ತಿ ಉಪ್ಪಿಟ್ಟು,
ಬಾಯಿ ಚಪಲಕ್ಕೆ ಜಂಕ್ ಫುಡ್ ತಿಂದು ಎಡವಟ್ಟು,
ಬದುಕಲ್ಲಿ ಚೆನ್ನಾಗಿದ್ ಆರೋಗ್ಯ ಹದಗೆಟ್ಟು,
ಬಯ್ಕೊಂಡ್ ತಿನ್ನೋದ್ ಬರೀ ಟ್ಯಾಬ್ಲೆಟ್ಟು.
ಬಾಳಿನ ಕೊನೆಗೆ ಹೋಗೋದ್ ಗಳಿಸಿದ್ದೆಲ್ಲಾ ಬಿಟ್ಟು,
ಬೇಕಿತ್ತಾ ಇದೆಲ್ಲಾ ಚೆನ್ನಾಗಿರೋದ್ ಬಿಟ್ಟು.

OOO

# ಒಲವಿನ ಮುಂಗಾರು



ಅಕ್ಷದಾ ಜೋಷಿ

ಎಡೆಬಿಡದ ಮುಂಗಾರು
ನನ್ನೆದೆಯ ಒಲವ ರಾಗಕೆ
ನಿನ್ನೊಲವ ಸಂಯೋಜನೆ
ತಪ್ಪಿಸುತಿದೆ ಎದೆಬಡಿತವೇತಕೆ

ಹನಿಗಳ ಮೇಲೊಂದು ಹನಿ
ಭುವಿಯ ತುಂಬ ವರ್ಷಾಧಾರೆ
ಮನವ ತಟ್ಟಿದೆ ನಿನ್ನ ಮೆಲುದನಿ
ತನುಮನ ಕೂಗಿದೆ ಒಮ್ಮೆನೀ ಬಳಬಾರೆ

ಮುಗ್ಧ ಹರಿವಾಣದಲಿ
ಪ್ರೇಮನೈವೇದ್ಯವಿರಿಸಿ
ಆಗಲಿ ರಾಗರಾಗಿಣಿಯ ಮಿಲನ
ಆಗಿಬಿಡು ನೀ ಎನ್ನ ಮನದರಸಿ



ಶ್ರಾವಣ ವರ್ಷಧಾರೆ
ತೆರೆಯಂದದಿ ಬಂದು,
ನಡೆಸಿದೆ ನೆನಪಿನ ಮಧುಮೇಳ,
ಹೊಂಬಿಸಿಲು ಹೇಳದೆ ನೀ ನನ್ನವಳೆಂದು..

OOO

# ತಿಂಗಳನೂರಿಗೆ ಹೋಗುವ



ಶೋಭಾ ಪುರೋಹಿತ್



ಗಳದಲಿ ಚೆಲ್ಲಿದೆ ಚಂದಿರನ ಬೆಳಕು
ಕಂಗಳಿಗೆ ಮುದ ನೀಡಿದೆ ಬೆಳ್ಳಿಯ ಹೊಳಪು
ಸಂಭ್ರಮವನು ತಂದಿದೆ ಈ ಹೊತ್ತಿನ ತಂಪು
ತಂಬೆಲರು ಸೂಸುತಿದೆ ಪರಿಮಳದ ಕಂಪು

ಬೆಳ್ಳಿ ತಟ್ಟೆಯಂದದಿ ಹೊಳೆವ ಚಂದಿರ
ಬಾನಿಂದ ಇಳಿವಂತಿದೆ ನೋಡು ಬಾರಾ
ಶೃಂಗಾರ ಸಮಯವಿದು ಸನಿಹ ಬಾ ನೀರೆ
ತಿಂಗಳನೂರಿಗೆ ಹೋಗುವ ಪ್ರಿಯೆ ಬಾರೇ

ಕ್ಷೀರ ಸಾಗರದಂತೆ ಹೊಳೆವ ಹೊಳೆಯಲ್ಲಿ
ಹಂಸತೂಲಿಕದಂಥ ನಾವೆಯಲಿ ತೇಲುತಲಿ
ನಮಗೆ ನಾವೇ ಇಲ್ಲಿ ಬೇರೆ ಇನ್ನಾರಿಲ್ಲ
ಸಮಯ ಕಳೆಯದೇ ಬೇಗ ಬಾ ನನ್ನ ನಲ್ಲೆ

ನಾವೆಯಲಿ ಸಾಗಿ ದೂರ ದಿಗಂತವ ಸೇರಿ
ಅಲ್ಲಿಂದ ಸೇರೋಣ ಆಗಸದಲಿ ಮೇಲೇರಿ
ಚಂದ್ರನ ಶೀತಲ ಕಿರಣಗಳ ಆಸ್ವಾದಿಸಿ
ಹಾಯಾಗಿ ಅಲೆಯುವ ತಾರೆಗಳ ಅರಸಿ

೦೦೦

# ಪ್ರೇಮಗೀತೆ



ಮುಕ್ತಾ ಶಾನಭಾಗ

ಕಲ್ಯಾಣಿ ಕನ್ನಡ ಶಾಲೆಗೆ ಹೋಗುವಾಗ ಅವಳ ಗೆಳತಿಯ ತಾಯಿ ಪಿಟೀಲು ನುಡಿಸುವುದನ್ನು ನೋಡಿದಾಗಿನಿಂದ ತಾನೂ ಪಿಟೀಲು ಕಲಿಯಬೇಕೆಂಬ ಆಸೆ ಅವಳಲ್ಲಿ ನೆಟ್ಟು ಬಿಟ್ಟಿತ್ತು.

ದಿನಕಳೆಯುತ್ತಿದ್ದಂತೇ ಅವಳ ಆಸೆ ಹೆಚ್ಚಾಗುತ್ತಲೇ ಇತ್ತು. ಆಗ ಅವಳ ಗೆಳತಿಯ ತಾಯಿ ತನ್ನಲ್ಲಿದ್ದ ಹಳೆಯ ಪಿಟೀಲನ್ನು ಅವಳಿಗೆ ಕೊಟ್ಟಿದ್ದರು. ಆದರೆ ಅವಳಿಗೆ ಕಲಿಸಲು ಅವರಿಂದ ಸಾಧ್ಯವಾಗಿರಲಿಲ್ಲ. ಏಕೆಂದರೆ ಆಗಲೇ ಹಾಸಿಗೆ ಹಿಡಿದ ಅವರು ಕೆಲವೇ ದಿನದಲ್ಲಿ ತೀರಿಕೊಂಡಿದ್ದರು.

ಅಲ್ಲಿ ಅವಳಿಗೆ ಪಿಟೀಲು ಕಲಿಸುವವರಾರೂ ಇರಲಿಲ್ಲ. ಅದೇ ಊರಿನ ದೇವಸ್ಥಾನದಲ್ಲಿ ಸಂಜೆಯ ಹೊತ್ತು ತನಗೆ ತಿಳಿದಂತೇ ಪಿಟೀಲು ನುಡಿಸಿ ಸಮಾಧಾನ ಪಡುತ್ತಿದ್ದಳು. ಅವಳಿಗೆ ಆಸಕ್ತಿ ಇದ್ದ ಕಾರಣ ಅಷ್ಟರಲ್ಲಿಯೇ ಅವಳು ತೃಪ್ತಿ ಪಡುತ್ತಿದ್ದಳು. ಅದೇ ದೇವಸ್ಥಾನದ ಅರ್ಚಕರ ಮಗ ಆನಂದನಿಗೂ ಪಿಟೀಲು ವಾದನ ಕೇಳುವುದೆಂದರೆ ತುಂಬಾ ಆಸಕ್ತಿ. ಆದರೆ ಅವರ ತಂದೆ ಇದಕ್ಕೆ ತದ್ವಿರುದ್ಧ.

"ಚೆನ್ನಾಗಿ ಶಾಲೆ ಕಲಿತು ನೌಕರಿ ಮಾಡೋದು ಬಿಟ್ಟು ಆ ದರಿದ್ರ ಪಿಟೀಲು ಕೊಯ್ಯುವುದನ್ನು ಕೇಳ್ತಾನೇ ಇರ್ತೀಯಲ್ಲಾ... ಇನ್ನು ಮುಂದೆ ಯಾವತ್ತಾದ್ರೂ ಟೇಪ್ ರೆಕಾರ್ಡರ್ ನಲ್ಲಾಗಲೀ ರೇಡಿಯೋದಲ್ಲಾಗಲೀ ಆ ಶಬ್ದ ಕೇಳಿದ್ರೆ ನಿನ್ನ ಮೂಳೆ ಮುರೀತೀನಿ ನೋಡ್ತಾ ಇರು." ಎಂದು ಬಾಯಿಗೆ ಬಂದಂತೇ ಬೈಯ್ಯುತ್ತಿದ್ದರು.

ಆನಂದ ಶಾಲೆ ಕಲಿಯುವುದರಲ್ಲಿಯೂ ಜಾಣನೇ.
ಶಾಲೆಯ ಪಾಠಗಳನ್ನು ಓದಿ ಸಮಯ ಸಿಕ್ಕರೆ ತಂದೆಯ ಕಣ್ಣು ತಪ್ಪಿಸಿ ಸಂಜೆ ದೇವಸ್ಥಾನಕ್ಕೆ ಹೋಗುತ್ತಿದ್ದ. ಅಲ್ಲಿ ಕಲ್ಯಾಣಿ ಪಿಟೀಲು ನುಡಿಸುವುದನ್ನು ಏಕಾಗ್ರತೆಯಿಂದ ಕೇಳುತ್ತ ಕುಳಿತಿರುತ್ತಿದ್ದ. ಹಾಗಂತ ಅವರಿಬ್ಬರಲ್ಲಿ ಅಷ್ಟೊಂದು ಆತ್ಮೀಯತೆಯೇನೂ ಇರಲಿಲ್ಲ. ಆದರೂ ಕಲ್ಯಾಣಿಯ ಕೈಲಿರುತ್ತಿದ್ದ ಪಿಟೀಲು ಅವನನ್ನು ಆ ದೇವಸ್ಥಾನದತ್ತ ಸೆಳೆಯುತ್ತಿತ್ತು.

ಹೀಗೆಯೇ ದಿನಗಳು ಕಳೆದು ಅವನ ಕಾಲೇಜು ಶಿಕ್ಷಣವೂ ಮುಗಿದಿತ್ತು. ಬೆಂಗಳೂರಿಗೆ ಹೋಗಿ ಯಾವುದಾದರೂ ಕೆಲಸ ಹುಡುಕುವಂತೇ ತಂದೆಯೇ ಒತ್ತಾಯ ಮಾಡಿ ಮಗನನ್ನು ತನ್ನ ಗೆಳೆಯನ ಮನೆಗೆ ಕಳಿಸಿ ಕೊಟ್ಟಿದ್ದರು. ಆನಂದನಿಗೆ ಅಲ್ಲಿ ಸಾಧಾರಣ ಕಂಪನಿಯೊಂದರಲ್ಲಿ ಕೆಲಸ ಸಿಕ್ಕಿತ್ತು. ಒಂದು ತಿಂಗಳು ಕಳೆದ ಮೇಲೆ ಆನಂದ ತಂದೆಯ ಗೆಳೆಯನ ಮನೆ ಬಿಟ್ಟು ಚಿಕ್ಕ ಬಾಡಿಗೆ ರೂಮೊಂದರಲ್ಲಿ ಇರತೊಡಗಿದ್ದ.

ಆನಂದನ ಯೋಗವೋ ಏನೋ ಅವನಿದ್ದ ರೂಮಿನ ಪಕ್ಕದಲ್ಲೇ ಪಿಟೀಲು ಕಲಿಸುವವರೊಬ್ಬರು ವಾಸಿಸುತ್ತಿದ್ದರು. ಅವರ ಬಳಿ ಐದಾರು ಜನ ಕಲಿಯಲು ಬರುತ್ತಿದ್ದರು. ಆನಂದ ತನಗೂ ಪಿಟೀಲು ಕಲಿಸುವಂತೇ ಅವರಲ್ಲಿ ಕೇಳಿಕೊಂಡ.

ರಾತ್ರಿ ಎಂಟರಿಂದ ಒಂಭತ್ತರ ತನಕ ಕಲಿಸುವುದಾಗಿ ಅವರು ಒಪ್ಪಿಕೊಂಡಿದ್ದರು. ಅಂದಿನಿಂದ ಆನಂದ ಕೆಲಸದಿಂದ ಬಂದ ಕೂಡಲೇ ಪಿಟೀಲು ಕಲಿಯಲು ಹೊರಡುತ್ತಿದ್ದ.

ಇವನ ಕೆಲಸದ ಜೊತೆಗೆ ಪಿಟೀಲು ಕಲಿಕೆ ಮುಂದುವರಿದಿತ್ತು. ಆರು ತಿಂಗಳು ಕಳೆದಿರಬಹುದು. ಅಷ್ಟರಲ್ಲೇ ಮನೆಯಲ್ಲಿ ಅವನ ತಾಯಿಗೆ ಫೆರಾಲಿಸೀಸ್ ಆಗಿದೆಯೆಂದು ತಂದೆಯಿಂದ ಫೋನ್ ಬಂದಿತ್ತು. ತಾಯಿಯ ಮೇಲೆ ಅಪಾರ ಪ್ರೀತಿ ಇಟ್ಟುಕೊಂಡಿದ್ದ ಆನಂದ ಕೂಡಲೇ ಲಗೇಜ್ ಸಹಿತ ಮನೆಗೆ ಹೊರಟು ಬಂದಿದ್ದ.

ಅವನ ತಂದೆ ಕೂಡಲೇ ಅವರನ್ನು ಆಸ್ಪತ್ರೆಗೆ ಸೇರಿಸಿ ಟ್ರೀಟ್ ಮೆಂಟ್ ಕೊಡಿಸಿದ್ದರಿಂದ ಬಾಯಿ (ಮಾತು) ಕೈ ಎಲ್ಲಾ ಸರಿಯಾಗಿತ್ತು. ಕಾಲಿನಿಂದ ಮಾತ್ರ ಓಡಾಡಲು ಆಗುತ್ತಿರಲಿಲ್ಲ. ಮೂರು ತಿಂಗಳು ಸರಿಯಾಗಿ ಆರೈಕೆ ಮಾಡಿದರೆ ಸ್ವಲ್ಪ ಸುಧಾರಿಸಬಹುದೆಂದು ಡಾಕ್ಟರರು ಹೇಳಿದ್ದರು.

ನಾಟಿ ವೈದ್ಯರಿಗೆ ತೋರಿಸಿದಾಗ ಅವರು ಗಿಡಮೂಲಿಕೆಗಳ ತೈಲವನ್ನು ಕೊಟ್ಟಿದ್ದರು. ಆನಂದನೇ ತಾಯಿಯ ಕಾಲಿಗೆ ಮಸಾಜ್ ಮಾಡಿ ನಿದಾನವಾಗಿ ಬಚ್ಚಲು ಮನೆಯಲ್ಲಿ ಕುರ್ಚಿಯಲ್ಲಿ ಕುಳ್ಳಿರಿಸುತ್ತಿದ್ದ.

ಕಾಲಿಗೆ ಬಿಸಿನೀರಿನ ಶಾಖ ಕೊಟ್ಟು ನಂತರ ಸ್ನಾನ ಮಾಡಲು ನೀರು ಹದಗೊಳಿಸಿ ಅವರ ಪಕ್ಕದಲ್ಲೇ ಇಟ್ಟು ಬರುತ್ತಿದ್ದ. ಅವರು ಸ್ನಾನ ಮಾಡಿ ಅಲ್ಲೇ ಒಂದು ನೈಟಿಯನ್ನು ಧರಿಸುತ್ತಿದ್ದರು. ಮನೆಯಲ್ಲಿ ತಂದೆ ಮಗ ಇಬ್ಬರೂ ಊಟಕ್ಕೆ ಏನಾದರೂ ಮಾಡಿಕೊಳ್ಳುವರು. ದೇವರ ನೈವೇದ್ಯಕ್ಕೆ ಮಾಡುವ ಅನ್ನ ಹೇಗೂ ಎರಡೂ ಹೊತ್ತಿನ ಊಟಕ್ಕೆ ಸಾಕಾಗುತ್ತಿತ್ತು. ಅರ್ಚಕರಿಗೆ ಮಗನನ್ನು ಬೆಂಗಳೂರಿಗೆ ಕಳಿಸುವ ಬದಲಿಗೆ ಅರ್ಚಕ ವೃತ್ತಿಯನ್ನೇ ಕಲಿಸಬೇಕಿತ್ತೆಂದು ಈಗ ಅನಿಸತೊಡಗಿತ್ತು.

ಅದನ್ನೇ ಪತ್ನಿಯ ಮುಂದೆ ಒಂದೆರಡು ಬಾರಿ ಆಡಿಯೂ ತೋರಿಸಿದ್ದರು. ಆನಂದನ ತಾಯಿಗೂ ಮಗನನ್ನು ದೂರ ಕಳಿಸುವ ಮನಸ್ಸಿರಲಿಲ್ಲ. ಆನಂದನಿಗೂ ಅದೇ ಸರಿ ಅನ್ನಿಸಿದ್ದರಿಂದ ಅಪ್ಪನ ಜೊತೆ ತಾನೂ ದೇವಸ್ಥಾನಕ್ಕೆ ಪೂಜೆಗೆ ಹೋಗತೊಡಗಿದ್ದ.

ಅರ್ಚಕರು ತಮಗೆ ತಿಳಿದಷ್ಟನ್ನು ಮಗನಿಗೆ ಹೇಳಿಕೊಡುತ್ತಿದ್ದರು. ನಂತರ ಆನಂದ ಎಲ್ಲಾ ತರಹದ ಪೂಜಾ ವಿಧಿಗಳ ಪುಸ್ತಕಗಳನ್ನು ಓದಿ ಕಲಿಯತೊಡಗಿದ್ದ. ಮಗನ ಈ ಆಸಕ್ತಿಯನ್ನು ನೋಡಿ ತಂದೆಗೆ ಈಗ ಒಂದು ರೀತಿಯಲ್ಲಿ ಸಮಾಧಾನವೇ ಆಗಿತ್ತು.

ಆದರೆ ಪೌರೋಹಿತ್ಯ ಮಾಡುವ ಗಂಡಿಗೆ ಹೆಣ್ಣು ಕೊಡಲು ಯಾರೂ ತಯಾರಿಲ್ಲವೆಂಬ ಚಿಂತೆ ಅವರನ್ನು ಆಗಾಗ ಕಾಡುತ್ತಿತ್ತು. ಈಗಂತೂ ಮನೆಯಲ್ಲಿ ಅವನ ತಾಯಿಗೆ ಅನಾರೋಗ್ಯ. ಅವರಿಂದ ಯಾವ ಕೆಲಸವೂ ಆಗುತ್ತಿಲ್ಲವೆಂಬ ವಿಚಾರ ಗೊತ್ತಿರುವ ಯಾರೂ ತಮ್ಮ ಮನೆಗೆ ಹೆಣ್ಣು ಕೊಡಲು ಒಪ್ಪಲಿಕ್ಕಿಲ್ಲವೆಂಬ ಆತಂಕ ಅವರಿಗೆ.

ಆನಂದ ಮಾತ್ರ ಇದೆಲ್ಲಾ ಯೋಚಿಸದೇ ಎಲ್ಲ ಕೆಲಸಗಳನ್ನೂ ಬೇಸರವಿಲ್ಲದೇ ಮಾಡುತ್ತಿದ್ದ. ಇದಲ್ಲದೇ ಕರೆದ ಕಡೆಯಲ್ಲೆಲ್ಲ ಪೌರೋಹಿತ್ಯಕ್ಕೆ ತಂದೆಯನ್ನೂ ಕರೆದುಕೊಂಡು ಹೋಗುತ್ತಿದ್ದ. ಇದರಿಂದ ಒಳ್ಳೆಯ ಸಂಪಾದನೆಯೂ ಆಗುತ್ತಿತ್ತು. ಮೊದಮೊದಲು ತಾಯಿಯನ್ನು ಬಿಟ್ಟು ಹೋಗುವುದು ಅವರಿಗೆ ಸಮಸ್ಯೆಯಾಗುತ್ತಿತ್ತು. ಹಾಗಾಗಿ ಬೇರೆ ಕಡೆ ಪೌರೋಹಿತ್ಯಕ್ಕೆ ಕರೆದರೆ ಹೋಗಲು ಒಪ್ಪುತ್ತಿರಲಿಲ್ಲ.

ಕಲ್ಯಾಣಿ ದೇವಸ್ಥಾನಕ್ಕೆ ಬಂದವಳು ಅರ್ಚಕರ ಪತ್ನಿಯೊಂದಿಗೆ ಸ್ವಲ್ಪ ಹೊತ್ತು ಮಾತಾಡಿ ಏನಾದರೂ ಸಹಾಯ ಮಾಡಿ ಹೋಗುತ್ತಿದ್ದಳು. ಒಮ್ಮೆ ಅರ್ಚಕರಿಗೆ ಪಕ್ಕದ ಊರಿನಲ್ಲಿ ಗೃಹಪ್ರವೇಶದ ಕಾರ್ಯ ನಡೆಸಿಕೊಡುವುದಿತ್ತು. ಆಗ ಒಂದು ದಿನದ ಮಟ್ಟಿಗೆ ಮನೆಯನ್ನು ನೋಡಿಕೊಳ್ಳಲು ಕಲ್ಯಾಣಿಯನ್ನು ಕೇಳಿಕೊಂಡಿದ್ದರು. ಕಲ್ಯಾಣಿ ಸಂತೋಷದಿಂದ ಒಪ್ಪಿದ್ದಳು. ಅವರು ಮನೆಗೆ ಬರುವ ತನಕ ಅಮ್ಮನನ್ನು ನೋಡಿಕೊಂಡು ಮನೆಯನ್ನೂ ಸ್ವಚ್ಛಗೊಳಿಸಿದ್ದಳು. ಎಷ್ಟೆಂದರೂ ಗಂಡಸರೇ ಮಾಡುತ್ತಿದ್ದುದಲ್ಲವೇ...

ಆ ದಿನ ಅಮ್ಮನಿಗೆ ತಾನೇ ಸ್ನಾನ ಮಾಡಿಸಿ ಸೀರೆಯನ್ನೇ ಉಡಿಸಿದ್ದಳು. ಅರ್ಚಕರು ಬರುವಾಗ ಕುರ್ಚಿಯ ಮೇಲೆ ಸೀರೆಯುಟ್ಟು ಕುಳಿತ ಪತ್ನಿಯನ್ನು ನೋಡಿದ ಅರ್ಚಕರಿಗೆ ತುಂಬಾ ಸಂತೋಷವಾಗಿತ್ತು. ಪತ್ನಿಯ ಹತ್ತಿರ ಬಂದು ಅವರ ತಲೆಸವರಿದ್ದರು. ಕಲ್ಯಾಣಿಯನ್ನು ಬಾಯಿತುಂಬಾ ಹರಸಿದ್ದರು.

ಅದರ ನಂತರ ಬೇರೆ ಕಡೆಯಲ್ಲಿ ಪೌರೋಹಿತ್ಯಕ್ಕೆ ಕರೆದರೆ "ನೀವು ಹೋಗಿಬನ್ನಿ ನನ್ನ ಸಹಾಯಕ್ಕೆ ಕಲ್ಯಾಣಿಗೆ ಹೇಳುತ್ತೇನೆ." ಎಂದು ಆನಂದನ ತಾಯಿಯೇ ಹೇಳಿದ್ದರು.

ಅಂದಿನಿಂದ ಕಲ್ಯಾಣಿ ಪ್ರತೀದಿನ ಬಂದು ಅವರಿಗೆ ಸ್ನಾನ ಮಾಡಿಸಿ ಸೀರೆ ಉಡಿಸಿ ಹೋಗುತ್ತಿದ್ದಳು. ತೈಲದ ಮಸಾಜನ್ನು ಆನಂದನೇ ಮಾಡುತ್ತಿದ್ದ. ಈಗೀಗ ಅವರಿಂದ ಸ್ವಲ್ಪ ನಿಂತುಕೊಳ್ಳಲು ಆಗುತ್ತಿತ್ತು. ವೀಲ್ ಚೇರ್ ನಲ್ಲಿ ಬಾತ್ ರೂಮಿಗೆ ಹೋಗಿ ಬರತೊಡಗಿದ್ದರು. ಅಡುಗೆಮನೆಯಲ್ಲೂ ಸಣ್ಣಪುಟ್ಟ ಕೆಲಸ ಮಾಡುತ್ತಿದ್ದರು.

ಕಲ್ಯಾಣಿ ಅಭ್ಯಾಸಬಲದಂತೇ ಸಂಜೆಯ ಹೊತ್ತು ದೇವರ ಮುಂದೆ ಪಿಟೀಲು ನುಡಿಸುವುದು ನಡೆದೇ ಇತ್ತು. ಒಮ್ಮೊಮ್ಮೆ ಆನಂದನೂ ಅಲ್ಲಿಗೆ ಬರುತ್ತಿದ್ದ. ತಾನು ಕಲಿತಿದ್ದನ್ನು ಕಲ್ಯಾಣಿಗೂ ಕಲಿಸಿಕೊಟ್ಟಿದ್ದ. ಹೀಗಾಗಿ ಇಬ್ಬರಿಗೂ ಚೆನ್ನಾಗಿ ಅಭ್ಯಾಸವಾಗಿತ್ತು.

ಆ ವರ್ಷ ನವರಾತ್ರಿಯ ಸಮಯದಲ್ಲಿ ದೇವಸ್ಥಾನದಲ್ಲಿ ನಡೆಯುವ ಭಜನೆ ಕೀರ್ತನೆಗಳ ಜೊತೆಗೆ ಇವರಿಬ್ಬರ ಪಿಟೀಲುವಾದನವನ್ನೂ ನಡೆಸಿದ್ದರು. ಇದನ್ನು ನೋಡಿದ ಅರ್ಚಕರಿಗೆ ಆಶ್ಚರ್ಯದ ಜೊತೆಗೆ ಸಂತೋಷದಿಂದ ಮನಸ್ಸು ತುಂಬಿಬಂದಿತ್ತು. ಕಲ್ಯಾಣಿ ಮತ್ತು ಆನಂದರ ಮನಸ್ಸಿಗೂ ಅದೇನೋ ಸಂತೋಷ. ಆದರೆ ಅವರಿಬ್ಬರಲ್ಲಿ ಪಿಟೀಲು ಸ್ನೇಹವೊಂದನ್ನು ಬಿಟ್ಟರೆ ಅದಕ್ಕೂ ಹೆಚ್ಚಿನ ಆತ್ಮೀಯತೆಯೇನೂ ಇರಲಿಲ್ಲ.

ತಮ್ಮ ಮಗ ಆನಂದ ಮತ್ತು ಕಲ್ಯಾಣಿಯ ಅಭಿರುಚಿಗಳು ಒಂದೇ ಆದ ಕಾರಣ ಅರ್ಚಕರ ಮನಸ್ಸಿನಲ್ಲಿ ಒಂದು ಆಸೆ ಬಂದಿತ್ತಾದರೂ ಸಧ್ಯಕ್ಕೆ ಏನೂ ಹೇಳದೇ ಸುಮ್ಮನಿದ್ದರು.
ಕಲ್ಯಾಣಿ ದಿನವೂ ಅರ್ಚಕರ ಪತ್ನಿಯ ಸೇವೆಯನ್ನು ನಿಸ್ವಾರ್ಥ ಭಾವನೆಯಿಂದ ಮಾಡುತ್ತಿದ್ದಳು. ಅವರೂ ಬಡವರೇ. ಅವಳಿಗೆ ಹದಿನೈದು ವರ್ಷವಿದ್ದಾಗ ತಂದೆ ತಾಯಿ ಅಪಘಾತವೊಂದರಲ್ಲಿ ತೀರಿಕೊಂಡಿದ್ದರು.

ಅಣ್ಣ ಕಮಲಾಕರನಿಗಿಂತ ಕಲ್ಯಾಣಿ ಐದು ವರ್ಷ ಚಿಕ್ಕವಳು. ಕಮಲಾಕರ ಹತ್ತನೆಯ ತರಗತಿ ಓದಿಕೊಂಡಿದ್ದ. ತಂದೆ ತಾಯಿ ತೀರಿಕೊಂಡ ಕಾರಣ ಕಲ್ಯಾಣಿ ಒಂಭತ್ತನೇ ತರಗತಿ ಆದ ಮೇಲೆ ಮನೆಯಲ್ಲೇ ಇರತೊಡಗಿದ್ದಳು. ಕಮಲಾಕರ ಅದೇ ಊರಿನ ಸಹಕಾರಿ ಅಂಗಡಿಯಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದ. ಮನೆಯಲ್ಲಿ ತೊಂದರೆಯಿದ್ದುದನ್ನು ಕಂಡ ಸಂಬಂಧಿಕರೆಲ್ಲ ಸೇರಿ ಅವನಿಗೆ ಇಪ್ಪತ್ತೊಂದನೆಯ ವಯಸ್ಸಿಗೇ ಮದುವೆ ಮಾಡಿದ್ದರು.

ಅವಳ ಅತ್ತಿಗೆ ಸುಧಾ ಕಲ್ಯಾಣಿಯ ಸ್ವಾತಂತ್ರ್ಯಕ್ಕೆ ಅಡ್ಡಿ ಬರದಿದ್ದುದು ಕಲ್ಯಾಣಿಯ ಅದೃಷ್ಟವೆಂದೇ ಹೇಳಬೇಕು. ಬೆಳಗಿನ ಸಮಯದಲ್ಲಿ ಅರ್ಚಕರ ಪತ್ನಿಗೆ ಸ್ನಾನ ಮಾಡಲು ಸೀರೆ ಉಡಲು ಸಹಾಯ ಮಾಡುತ್ತಿದ್ದಳು. ಹಾಗೆಯೇ ಮನೆಕೆಲಸದಲ್ಲೂ ಸಹಾಯ ಮಾಡುತ್ತಿದ್ದಳು. ಆನಂದನ ತಾಯಿಗಂತೂ ಕಲ್ಯಾಣಿ ಈಗ ತುಂಬಾ ಆಪ್ತಳಾಗಿದ್ದಳು.

ಒಂದು ದಿನ ಆನಂದ ತಮ್ಮದೇ ದೇವಸ್ಥಾನದ ಪೂಜೆಗೆಂದು ಹೋಗಿದ್ದ. ಕಲ್ಯಾಣಿ ಅಮ್ಮನಿಗೆ ಸ್ನಾನ ಮಾಡಿಸಿ ಮನೆಗೆ ಹೊರಟಿದ್ದಳು. ಆಗ ಅರ್ಚಕರು ಕಲ್ಯಾಣಿಯನ್ನು ಕರೆದು "ಮಗೂ ನಮ್ಮ ಮನೆಗೆ ನೀನು ಬೆಳಕಾಗಿ ಬರುತ್ತೀಯಾ..?" ಎಂದು ನೇರವಾಗಿ ಕೇಳಿದ್ದರು. ಕಲ್ಯಾಣಿಗೆ ಮಾತೇ ಹೊರಡದೇ ಮನೆಗೆ ಬಂದಿದ್ದಳು.

ಸಂಜೆ ಕಲ್ಯಾಣಿ ದೇವಸ್ಥಾನಕ್ಕೆ ಹೋದಾಗ ಆನಂದ ಏನೋ ಯೋಚಿಸುತ್ತ ಕುಳಿತಿರುವುದನ್ನು ನೋಡಿದರೂ ಅವನನ್ನು ಮಾತನಾಡಿಸುವ ಧೈರ್ಯ ಬರದೇ ತನ್ನ ಪಿಟೀಲು ಕೈಗೆತ್ತಿಕೊಂಡು ಕುಳಿತಳು.

ಕಲ್ಯಾಣಿ ಪಿಟೀಲು ನುಡಿಸುವುದನ್ನು ತನ್ಮಯನಾಗಿ ನೋಡುತ್ತ ಕುಳಿತಿದ್ದ ಆನಂದ. ಅವನು ಕಲ್ಯಾಣಿಯನ್ನು ಚಿಕ್ಕ ವಯಸ್ಸಿನಿಂದಲೂ ನೋಡುತ್ತಿದ್ದರಿಂದ ಅವಳ ಗುಣ ನಡತೆಗಳು ಅವನಿಗೆ ಇಷ್ಟವಾಗಿದ್ದವು. ಅವಳು ತಮಗೆ ಮಾಡುತ್ತಿದ್ದ ಸಹಾಯಕ್ಕೆ ಅವನ ಮನದಲ್ಲಿ ಅವಳ ಬಗ್ಗೆ ತುಂಬಾ ಕೃತಜ್ಞತೆಯಿತ್ತು.

ಆದರೆ ಇಂದೇಕೋ ಕಲ್ಯಾಣಿಯನ್ನು ಎವೆಯಿಕ್ಕದೇ ನೋಡತೊಡಗಿದ್ದ. ಇದ್ದಕ್ಕಿದ್ದಂತೇ ಅವಳತ್ತ ಆಕರ್ಷಿತನಾಗಿದ್ದು ಅವನಿಗೇ ಅಚ್ಚರಿಯಾಗಿತ್ತು. ಆದರೂ ತನ್ನ ಮನಸ್ಸಿಗೆ ಕಡಿವಾಣ ಹಾಕಿಕೊಂಡಿದ್ದ. ಅದೂ ಅಲ್ಲದೇ ಕಲ್ಯಾಣಿಯ ಮನಸ್ಸಿನಲ್ಲಿ ಏನಿದೆಯೋ. ಯಾರಿಗೆ ಗೊತ್ತು... ಒಂದುವೇಳೆ ಅವಳಿಗೂ ಶಹರದಲ್ಲಿ ಒಳ್ಳೆಯ ನೌಕರಿಯಲ್ಲಿರುವ ಗಂಡನೇ ಬೇಕೆಂಬ ಆಸೆಯಿದ್ದರೆ....ಎಂದುಕೊಂಡು ತನ್ನ ನೋಟವನ್ನು ಬದಲಿಸಿದ್ದ.

ತಮ್ಮ ಮನೆಗೆ ಸಹಾಯ ಮಾಡುತ್ತಿದ್ದಾಳೆಂಬ ಕಾರಣದಿಂದ ಅವಳನ್ನು ತಾನು ಮದುವೆಯಾಗಲು ಬಯಸುವುದು ತಪ್ಪು. ಕಲ್ಯಾಣಿ ತನ್ನ ಮನಸ್ಸಿಗೊಪ್ಪುವ ಗಂಡನ್ನು ಮದುವೆಯಾಗಿ ಎಲ್ಲಾದರೂ ಸುಖವಾಗಿರಲೆಂದು ಅಂದುಕೊಂಡರೂ ಕಣ್ಣುಗಳು ಮತ್ತೊಮ್ಮೆ ಅವಳನ್ನೇ ನೋಡಿದ್ದವು. ಅಕಸ್ಮಾತ್ತಾಗಿ ಕಲ್ಯಾಣಿ ತಲೆಯೆತ್ತಿ ಆನಂದನತ್ತ ನೋಡಿದ್ದಳು. ಆನಂದ ತನ್ನತ್ತಲೇ ನೋಡುತ್ತಿದ್ದುದನ್ನು ಕಂಡಾಗ ಆ ದಿನ ಅರ್ಚಕರು ಕೇಳಿದ್ದು ನೆನಪಾಗಿ ಮತ್ತೊಮ್ಮೆ ಅವನನ್ನು ದಿಟ್ಟಿಸಿದ್ದಳು. ಆಗ ಆನಂದನೂ ಅವಳತ್ತ ನೋಡಿದ್ದ.

ಆ ಕ್ಷಣ ಅವಳ ಕಣ್ಣಿನಲ್ಲಿ ಪ್ರೇಮದ ಕಿರಣವೊಂದು ಗೋಚರಿಸಿದಂತೇ ಆನಂದನಿಗೆ ಅನಿಸಿತ್ತು. ಅಥವಾ ಇದು ಕೇವಲ ತನ್ನ ಭ್ರಮೆಯೋ ಅಂತಲೂ ಅನಿಸಿ ಸುಮ್ಮನಾಗಿದ್ದ.ಆದರೂ ಅದೇಕೋ ಅವನ ಕಣ್ಣುಗಳು ಮತ್ತೆ ಅವಳನ್ನೇ ನೋಡಿದ್ದವು. ಇದೀಗ ಇಬ್ಬರ ಕಣ್ಣುಗಳೂ ಬೆರೆತು ಮನಸ್ಸಿಗೆ ಅರ್ಥವಾಗದ ಭಾಷೆ ಅವರ ನಾಲ್ಕೂ ಕಣ್ಣುಗಳಿಗೆ ಅರ್ಥವಾಗಿತ್ತು.

ಒಂದೆರಡು ನಿಮಿಷಗಳು ಇಬ್ಬರ ದೃಷ್ಟಿಗಳ ಮಿಲನವಾಗಿತ್ತು. ನಂತರ ಕಲ್ಯಾಣಿಯ ಕಣ್ಣಿನ ರೆಪ್ಪೆಗಳು ನಾಚಿಕೆಯಿಂದ ಕೆಳಕ್ಕೆ ಬಾಗಿದ್ದವು. ಅವಳ ಕಣ್ಣಿನ ಭಾಷೆ ಆನಂದನ ಹೃದಯಕ್ಕೂ ಅರ್ಥವಾಗಿತ್ತು. ರೋಗಿ ಬಯಸಿದ್ದೂ ಒಂದೇ ವೈದ್ಯರು ಹೇಳಿದ್ದೂ ಒಂದೇ ಎನ್ನುವಂತೇ ಇಬ್ಬರ ಮನಸ್ಸುಗಳೂ ಪ್ರೇಮಗೀತೆ ಹಾಡತೊಡಗಿತ್ತು.

ಅರ್ಚಕರು ಕಲ್ಯಾಣಿಯೊಂದಿಗೆ ತಾನು ಕೇಳಿದ ವಿಚಾರವನ್ನು ಆನಂದನಿಗೆ ತಿಳಿಸಿರಲಿಲ್ಲ. ಆದರೂ ಈ ಕ್ಷಣದಲ್ಲಿ ದೇವರ ಪವಿತ್ರ ಸ್ಥಳದಲ್ಲಿ ಕಲ್ಯಾಣಿ ಎಂಬ ದೇವತೆ ಆನಂದನ ಮನದಲ್ಲಿ ಸ್ಥಿರವಾಗಿ ನಿಂತು ಮನೆ ಮಾಡಿಬಿಟ್ಟಳು.

ooo

# ಪ್ರತಿಯೊಂದು ಕಷ್ಟಕ್ಕೂ ಸಾವಿದೆ. ತಾಳ್ಮೆ ಇರಬೇಕು ಅಷ್ಟೇ..



ಮಾಲತಿ ಜೈನ್

ತಾಳಿದವಬಾಳಿಯಾನು ಎಂಬ ಗಾದೆಮಾತಿದೆ..
ಅದೇನೋ ಸರಿ. ಆದರೆ ಕಷ್ಟಗಳನ್ನುಸಹಿಸಿಕೊಳ್ಳುವುದು ಬಹಳ ಕಷ್ಟ. ಕೆಲವು ಸಲಸಹಿಸಲಾರದ ಕಷ್ಟಗಳೂ ಎದುರಾಗುತ್ತವೆ.. ಪರಿಹಾರವಿಲ್ಲದ ಸಮಸ್ಯೆಗಳು...ಹಾಗೆಂದು ನಾವು ತಾಳ್ಮೆ ಕಳೆದು ಕೊಳ್ಳಲು ಸಾಧ್ಯವಿಲ್ಲ. ಆಗುವುದನ್ನು, ಬರುವು ದನ್ನು ತಪ್ಪಿಸಲು ಸಾಧ್ಯವಿಲ್ಲ. ಕಷ್ಟಗಳು ಬಂದಾಗ ಎದುರಿಸಲೇ ಬೇಕಾಗುತ್ತದೆ. ಧೈರ್ಯ ಕಳೆದುಕೊಳ್ಳದೆ, ಮನಸ್ಸನ್ನು ಕಲ್ಲು ಮಾಡಿಕೊಳ್ಳಬೇಕು. ನಮಗೆ ಕಷ್ಟ ಇದೆಯೆಂದು, ಇನ್ನೊಬ್ಬರ ಹತ್ತಿರ ತಾಳ್ಮೆ ಕಳೆದುಕೊಳ್ಳುವುದು ಸರಿಯಲ್ಲ.

ಕಷ್ಟದ ಅನುಭವವಿರುವವರಿಗೆ ಕಷ್ಟಬಂದರೆ, ದೊಡ್ಡ ಮಾತಿಲ್ಲ..ಆದರೆ ಕಷ್ಟದ ಅನುಭವವಿ ಲ್ಲದವರಿಗೆ, ಅನಿರೀಕ್ಷಿತ ಕಷ್ಟಗಳು ಎದುರಾದಾಗ, ಸಹಿಸಿಕೊಳ್ಳುವುದು ಬಹಳ ಕಷ್ಟ. ಕಷ್ಟಕ್ಕೆ ಸಾವಿದೆ ಅನ್ನುತ್ತಾರೆ. ಆದರೆ ನಾನು ಕಂಡ ಹಾಗೆ ಕೆಲವರು ಸಾಯುವ ತನಕವೂ ಕಷ್ಟ ಅನುಭವಿ ಸುತ್ತಲೇ ಇರುತ್ತಾರೆ. ಆದರೆ ನಾವು ಕಷ್ಟದಲ್ಲೂ ಸುಖವನ್ನು ಕಾಣಬೇಕು. ಆ ಕಷ್ಟಗಳಲ್ಲೂ ಒಂದು ರೀತಿಯ ಸುಖವಿದೆ. ಅದನ್ನೆದುರಿಸಿ, ನಾವು ಜಯಶೀಲರಾದಾಗ, ಆ ಕಷ್ಟದ

ದಿನಗಳನ್ನು ತಿರುಗಿ ನೋಡಿದಾಗ ಆ ಕಷ್ಟದಲ್ಲೂ ಏನೋ ಸುಖವಿತ್ತೆಂದು ನನಗೆ ಅನಿಸುತ್ತದೆ. ಅಲ್ಲದೆ ಆ ನಮ್ಮ ಕಷ್ಟದಲ್ಲಿ ಸಹಭಾಗಿಗಳಿದ್ದರೆ, ಆ ಕಷ್ಟದಲ್ಲೂ ನಗುವಿನ ಕ್ಷಣಗಳು ಸಂತೋಷ ನೀಡುತ್ತವೆ. ನಗಲು ಕಲಿಯಬೇಕು. ನೋವಿನ ಕ್ಷಣಗಳಲ್ಲೂ, ಹಾಸ್ಯ ದ ಮಾತುಗಳಿಗೆ ನಮಗೆ ನಗು ಬರಬೇಕು. ಆಗ ಆ ಕಷ್ಟಗಳನ್ನು, ನೋವುಗಳನ್ನು ಮರೆಯಲು ಸಾಧ್ಯ. ಎಷ್ಟೋ ಕಷ್ಟ ಪಟ್ಟವರು, ಮುಂದೆ ಸುಖದ ದಿನಗಳನ್ನು ನೋಡುತ್ತಾರೆ. ಕಷ್ಟದ ನಂತರ ಬರೋ ಸುಖ ಬೆಲೆಕಟ್ಟಲಾಗದಂತಹುದು.ಕಷ್ಟ ಮನುಷ್ಯನಿಗೆಬಾರದೆ, ಕಲ್ಲಿಗೆ ಬರುತ್ತದೆಯೇ.ಕಷ್ಟ ಬಂದಾಗ ದೇವರ ಹತ್ತಿರ, ಜ್ಯೋತಿಷಿಗಳ ಹತ್ತಿರ ಓಡುತ್ತೇವೆ. ಪರಿಹಾರಕೇಳಲು..ಏನೋ ಅದು ಅವರವರ ನಂಬಿಕೆ. ಇರುಳು ಕಳೆದು, ಬೆಳಕು ಮೂಡದಿರುವುದೇ...

ಅದೇನೋ ನಿಜ. ಆದರೆ ಕಷ್ಟಗಳು ಕಳೆಯದೆ ಇರುವುದೂ ಇದೆ. ಏನೋ ಅವರವರ ಕರ್ಮ ಫಲ,ಪಡೆದುಬಂದಿರೋ ಭಾಗ್ಯ ಅನ್ನುತ್ತೇವೆ.

ಕೆಲವರು ಸಂತೋಷದಲ್ಲಿರುವಾಗ ಬಿರುಗಾಳಿಬೀಸುತ್ತದೆ. ಕಷ್ಟದ ಹಿಂದೆ ಎಷ್ಟೋ ಸಲ ಬಯಸದೇ ಬಂದ ಭಾಗ್ಯ ಅನ್ನೋ ಹಾಗೆ ಸುಖದ ದಿನಗಳು ಬರಬಹುದು. ಕಷ್ಟ ಬಂತೆಂದು, ಕೆಲವರು ಅಸಹಾಯಕರಾಗಿ, ಏನೂದಾರಿತೋಚದೆ, ಆತ್ಮಹತ್ಯೆಮಾಡಿಕೊಳ್ಳುವವರೂ ಇದ್ದಾರೆ. ಆದರೆ ಅದರಿಂದ ಏನು ಸಾಧಿಸಿದ ಹಾಗಾಯ್ತು. ಕಷ್ಟಗಳನ್ನು ಸಹಿಸಿ, ಎದುರಿಸಿ, ಸಾಧನೆ ಮಾಡಿ ತೋರಿಸಿದಾಗ, ಅದರಲ್ಲಿರೋ ಸಂತೋಷ, ಕೃತ ಕೃತ್ಯಭಾವ ಯಾವುದರಲ್ಲೂ ಇಲ್ಲ. ಬಾಳೊಂದು ಹೋರಾಟ. ಈ ಹೋರಾಟದಲ್ಲಿ ಗೆದ್ದವರು ಸಾಧಕರು. ನಮ್ಮ ಅದೃಷ್ಟವೂ ನಮ್ಮ ಜತೆಗಿರಬೇಕು. ಕೆಲವರು ಮುಟ್ಟಿದ್ದೆಲ್ಲಾ ಚಿನ್ನ,ಕೆಲವರು ಮುಟ್ಟಿದ್ದೆಲ್ಲಾ ಮಣ್ಣು. ಅವರವರ ಜಾತಕ ಫಲ, ಹುಟ್ಟಿದ ಘಳಿಗೆ, ನಕ್ಷತ್ರವೆಂದು ಣಅನಿಸುತ್ತದೆ. ಏನೇ ಬರಲಿ, ದೇವರ ದಯೆ ಇರಲಿ, ಎಂದು ತಾಳ್ಮೆಯಿಂದ, ಸ್ಥಿತಪ್ರಜ್ಞ ರಾಗಿ, ನಗುನಗುತ್ತಾ ಬಾಳುವುದರಲ್ಲಿ ಸುಖವಿದೆ. ನಾಳೆಯ ಬಗ್ಗೆ ಚಿಂತಿಸದೆ, ಹಿಂದಿನ ನೋವು ಗಳನ್ನು ಮರೆತು, ಇಂದಿನ ದಿನವನ್ನು ಸಂತೋಷದಿಂದ ಅನುಭವಿಸುವುದು ಉತ್ತಮ.ಇದೂ ಕಷ್ಟದ ವಿಚಾರವೇ. ಹೀಗೆ ಇರಲು ಸಾಧ್ಯವಿರುವವರು ಸುಖಿಗಳು....

ooo



# ಭಾರತಾಂಬೆಗೆ ನನ್ನ ನಮನ



ಕಾ ವಿ ರಮೇಶ್ ಕುಮಾರ್

ಪುಣ್ಯಭೂಮಿಯಲೆನ್ನ ಜನನ
ಭಾರತಾಂಬೆಗೆ ನನ್ನ ನಮನ
ವಂದೇಮಾತರಂ ಉಸಿರೆಂದೆ
ಎಂದೆಂದಿಗೂ ನುಡಿಯೊಂದೇ

ತತ್ತ್ವಗಳ ಭವ್ಯತೆಯ ಬುವಿಯಿದು
ಪರಂಪರೆಯ ದಿವ್ಯತೆಯ ಮಣ್ಣಿದು
ತಪೋಭೂಮಿ ಭಾರತಾಂಬೆಯ
ಸಂಸ್ಕಾರದ ನಿತ್ಯಸತ್ಯ ನೆಲೆಯಿದು

ಸ್ನೇಹ, ಶಾಂತಿ ಸಂಸ್ಕೃತಿಯ
ಧರ್ಮ ಸಂದೇಶವು ನಮ್ಮದು
ವೈವಿಧ್ಯತೆಯಲ್ಲಿ ಐಕ್ಯತೆಯು
ಇತಿಹಾಸದ ಪುಟಗಳಲ್ಲಿ ಶೋಭಿಪುದು

ನಾಡನು ಕಟ್ಟಿದ ವೀರರ ಕಥೆಯಿದೆ
ಯೋಧರ ಹೋರಾಟದ ಇತಿಹಾಸವಿದೆ
ಸರ್ವಧರ್ಮ ಸಹಿಷ್ಣುತೆ ಪೋಷಿತೆ
ಜಯಭಾರತಿ ಪುಣ್ಯ ಚರಿತೆ

ಪ್ರತಿಪಾದಿತ ಕರ್ಮಸಿದ್ಧಾಂತದ
ಶುಭಫಲದ ಸ್ವರ್ಗತುಲ್ಯ ಧರೆಯಿದು
ಜೀವನತತ್ತ್ವದ ಉಪಭೋಗದ
ಅರಿವಿನ ವೇದಾಂತವಿಲ್ಲಿಹುದು

ಧರ್ಮತತ್ತ್ವ ಶಾಸ್ತ್ರ ಬೋಧನೆಯ
ಗೀತಸಾರದ ಪರಿತೋಷವಿದೆ
ಧರ್ಮಸಿದ್ಧಾಂತದ ಸರ್ವಚೈತನ್ಯ
ಸರ್ವತೋಮುಖ ನೈತಿಕ ಸಾರವಿದೆ

ವೇದಗಳ ಸೃಷ್ಟಿಯು ಈ ನೆಲದಲ್ಲಿ
ವೇದಾಂತಿಗಳ ಜನುಮವು ಇಲ್ಲಿ
ಮಹಾಕೃತಿಗಳು ಮಹಾಕಾವ್ಯಗಳಿಲ್ಲಿ
ದಾಸರು ಶರಣರ ಭಕ್ತಿಯ ಲೋಕವಿದು

ಸೃಷ್ಟಿಯಲಿ ಸಕಲ ಸಂಪನ್ಮೂಲತೆ
ತ್ಯಾಗಯೋಗದ ವಿಶ್ವಕೀರ್ತಿ ಮಾನ್ಯತೆ
ತಾಯಿ ಭಾರತಿ ಜನ್ಮದಾತೆ
ಅಖಂಡ ಅಮರ ಚರಿತೆ ಪೂಜಿತೆ

ooo

# ಓದಿದರೂ ಪರೀಕ್ಷೆಯ ಭಯವೇಕೆ?



ಅವಿನಾಶ ಸೆರೆಮನಿ

ಮಾರ್ಚ ಏಪ್ರಿಲ್ ತಿಂಗಳು ಬಂದರೆ ವಿದ್ಯಾರ್ಥಿಗಳಿಗೆ ಪರೀಕ್ಷೆಯ ಜ್ವರ ಕಾಡುತ್ತಾ ಇರುತ್ತೆ. ವಿದ್ಯಾರ್ಥಿಗಳು ಹಗಲು ರಾತ್ರಿ ಎನ್ನದೆ ನಿದ್ದೆಗೆಟ್ಟು ಓದಿ ಒಳ್ಳೆಯ ಅಂಕಗಳನ್ನು ಗಳಿಸಿ ಉನ್ನತ ಶ್ರೇಣಿಯಲ್ಲಿ ಪಾಸಾಗಿ ಹೆತ್ತ ತಂದೆ ತಾಯಿ ಮತ್ತು ಕಲಿಸಿದ ಗುರುಗಳಿಗೆ ಹೆಸರು ತರುವ ಬಯಕೆ. ವಿದ್ಯಾರ್ಥಿಗಳು ಕೂಡ ಸತತವಾಗಿ ಶ್ರದ್ಧೆಯಿಂದ ಓದಿ ಇನ್ನೇನು ಪರೀಕ್ಷೆ ಸಮೀಪಿಸುತ್ತಿದ್ದಂತೆ ಮನದೊಳಗೆ ಭಯ ಶುರುವಾಗುತ್ತದೆ ಅದನ್ನ ಓದಬೇಕು ಇದನ್ನ ಓದಬೇಕು ಎಂದೆಲ್ಲ ಅಂದುಕೊಳ್ಳುವಾಗ ಒತ್ತಡವು ನೆಮ್ಮದಿಯನು ಹತ್ತಿಕ್ಕಲು ಶುರು ಮಾಡುತ್ತದೆ. ಯಾವಾಗ ಒತ್ತಡಕ್ಕೆ ಜಾಗ ನೀಡುವಿರೋ ಆಗ ಭಯವೂ ತನ್ನ ಸ್ಥಾನವನ್ನು ಅಲಂಕರಿಸುತ್ತದೆ.



ಪ್ರಸ್ತುತ ವಿದ್ಯಾರ್ಥಿಗಳು ಹೇಳುವುದೇನೆಂದರೆ ಸರ್ ನಾವು ಎಷ್ಟೇ ಓದಿದರು ನಮಗೆ ಪರೀಕ್ಷೆಯ ಭಯವೂ ಹೋಗುವುದೇ ಇಲ್ಲವಲ್ಲ ಯಾಕೆ ಸರ್ ಎಂದು ಹಲವು ವಿದ್ಯಾರ್ಥಿಗಳು ನನಗೆ ಕಾಲೇಜಿನಲ್ಲಿ ಪದೇ ಪದೇ ಕೇಳುವುದುಂಟು.ಇಲ್ಲಿ ಒಂದು ಉದಾಹರಣೆ ಮೂಲಕ ನಾನು ವಿವರಿಸುತ್ತೇನೆ.ಒಬ್ಬ ವ್ಯಕ್ತಿ ತಾನು ತಲುಪಬೇಕೆಂಬ ದಾರಿಯ ಮಾರ್ಗ ತಿಳಿದಿದ್ದರೂ ಮನದೊಳಗೆ ಗೊಂದಲವು ಆವರಿಸಲು ಶುರು ಮಾಡುತ್ತದೆ ಏಕೆಂದರೆ ಯಾವಾಗ ಅವನು

ತನ್ನ ದಾರಿಯ ಮಾರ್ಗವನ್ನು ಸರಿಯಾಗಿ ಅರಿತಿರುವುದಿಲ್ಲವೇ ಆಗ ಅವನಿಗೆ ತಾನಂದುಕೊಂಡ ಸ್ಥಳವನು ತಲುಪುವವರೆಗೆ ಗೊಂದಲವು ನಿರ್ಗಮಿಸುವುದಿಲ್ಲ.ಹಾಗೆಯೇ ವಿದ್ಯಾರ್ಥಿಗಳು ಎಲ್ಲ ವಿಷಯಗಳನ್ನು ಸವಿಸ್ತಾರವಾಗಿ ಓದಿದರೂ ಪರೀಕ್ಷೆಗಳು ಮುಗಿಯುವ ತನಕ ಭಯವೂ ಮನದೊಳಗೆ ತನ್ನ ಬಿಡಾರ ಹೂಡಿರುತ್ತದೆ. ಯಾವಾಗ ವಿಷಯವಾರು ಪತ್ರಿಕೆಗಳು ಒಂದೊಂದೇ ಮುಗಿಯುತ್ತಾ ಹೋಗುತ್ತವೆಯೋ ಆಗ ಸ್ವಲ್ಪ ಸ್ವಲ್ಪ ಪರೀಕ್ಷೆ ಭಯ ಕಡಿಮೆಯಾಗುತ್ತಾ. ಕೊನೆಗೆ ಅಂತಿಮವಾಗಿ ಭಯವೂ ನಿರ್ಗಮಿಸಿ ಪರೀಕ್ಷೆ ಚೆನ್ನಾಗಿ ಮುಗಿದವು ಎಂಬ ಸಂತೃಪ್ತಿಯ ಭಾವ ವಿದ್ಯಾರ್ಥಿಗಳನ್ನು ಮುತ್ತಿ ಸಂತಸವನು ನೀಡುತ್ತದೆ.

ಓದುವುದು ಕಲಿಕೆಯ ಭಾಗವಾದರೆ ಭಯವು ವ್ಯಕ್ತಿಯ ಭಾವನಾತ್ಮಕ ಅಂಶವಾಗಿರುತ್ತದೆ. ಹಾಗಾಗಿ ಓದಿದರೂ ಭಯವೆಂಬ ಭೂತ ಮನವನ್ನು ಬಿಟ್ಟು ತೆರಳದು. ಯಾವಾಗ ಓದು ಜ್ಞಾನೇಂದ್ರಿಯವನ್ನು ಪ್ರವೇಶಿಸಿ ಪರೀಕ್ಷೆಯಲ್ಲಿ ತನ್ನಯ ಕಾರ್ಯವನ್ನು ನಿರ್ವಹಿಸುತ್ತಾ ಸಾಗುತ್ತದೆಯೋ. ಹಾಗೆ ನೆನಪಿನ ಶಕ್ತಿಯ ಮೂಲಕ ಬಿತ್ತರಿಸಲು ಆರಂಭಿಸುತ್ತದೆಯೋ ಭಯ ಸಾವಕಾಶವಾಗಿ ಮೋಡವು ಬಾನಿನಿಂದ ಸರಿಯುತ್ತಾ ಹೋದಂತೆ ಭಯವೂ ಕೂಡ ಸಣ್ಣ ಹೆಜ್ಜೆಯಿಡುತ ಮನದಿಂದ ಹೇಳಲು ಹೆಸರಿಲ್ಲದಂತೆ ತೆರಳುತ್ತದೆ. ಹಾಗಾಗಿ ವಿದ್ಯಾರ್ಥಿಗಳು ಭಯವೆಂಬ ಭೂತಕ್ಕೆ ಹೆದರದೆ ಓದಿನ ಸಂತೃಪ್ತತೆಯಿಂದ ನಿರಾಳವಾಗಿ ಯಾವುದೇ ಮಾನಸಿಕ ಒತ್ತಡಕ್ಕೆ ಒಳಗಾಗದೆ ಧೈರ್ಯದಿಂದ ಪರೀಕ್ಷೆಗಳಿಗೆ ಸಿದ್ಧರಾಗಬೇಕು.

ಓದಿನಲ್ಲಿ ಪಠ್ಯಪುಸ್ತಕದ ಸಂಪತ್ತಿರುತ್ತದೆ. ಆದರೆ ಭಯದಲ್ಲಿ ಜೀವವನ್ನೇ ಅಲುಗಾಡಿಸುವ ಭೂಕಂಪದ ರೀತಿಯ ಆಪತ್ತಿರುತ್ತದೆ ಹಾಗಾಗಿ. ಓದಿದರೂ ವಿದ್ಯಾರ್ಥಿಗಳು ಪರೀಕ್ಷೆಗೆ ಹೆದರದೆ ಈ ಕೆಳಗಿನ ಅಂಶಗಳನ್ನು ಪಾಲಿಸಿದರೆ ಭಯದಿಂದ ಮುಕ್ತರಾಗಬಹುದು.

1.ಓದಿದ್ದೇನೆ ಭಯವೇ ನಿನಗೇಕೆ ಹೆದರಲಿ ಎಂದು ನಮಗೆ ನಾವೆ ಅಂದುಕೊಳ್ಳಬೇಕು.

2.ಓದಿದ್ದೇನೆ ಪರೀಕ್ಷೆಯನು ದಿಟ್ಟತನದಿ ಎದುರಿಸುವೆ ಎಂಬ ಆತ್ಮವಿಶ್ವಾಸವಿರಬೇಕು(ಅತಿಯಾಗಬಾರದು)

3.ವಿಷಯದ ಬಗ್ಗೆ ಆಸಕ್ತಿಯನ್ನು ಬೆಳೆಸಿಕೊಂಡರೆ ಭಯವೂ ದೂರವಾಗುವುದು.

4.ಓದಿದ ತಕ್ಷಣವೇ ಎಲ್ಲವನ್ನು ನೆನಪಿಸಿಕೊಳ್ಳಲು ಪ್ರಯತ್ನಿಸಬಾರದು. ಸಮಯದ ಅಂತರದಿಂದ ಒಂದೊಂದು ಅಧ್ಯಾಯದ ಉತ್ತರಗಳನ್ನು ಪುನರ ಮನನ ಮಾಡಿಕೊಳ್ಳಬೇಕು.

5.ನನ್ನ ಸಹಪಾಠಿಗಳಿಗಿಂತ ಹೆಚ್ಚಿನ ಅಂಕ ತೆಗೆದುಕೊಳ್ಳಬೇಕು ಎಂದು ಪರೀಕ್ಷೆ ಸಮೀಪಿಸಿದಾಗ ಮನದಲಿ ಅಂದುಕೊಳ್ಳಲೇಬಾರದು.

6.ಓದಿಗಿಂತ ಭಯವೇನು ಹರಿತವಾದುದ್ದಲ್ಲ ಎಂದು ತಿಳಿಯಬೇಕು.

7.ಓದುವ ವಿಷಯವನ್ನು ಸರಿಯಾಗಿ ಅರಿತುಕೊಳ್ಳಬೇಕು.

8.ಓದಿದ್ದನ್ನು ಆಗಾಗ ಮೆಲುಕು ಹಾಕುತ್ತಿರಬೇಕು

9.ಏನೋ ಒಂದು ಉತ್ತರ ಬರದಿದ್ದರೆ ನೊಂದುಕೊಳ್ಳಬಾರದು.

10.ಓದಿದ್ದೇವೆ ವಿಷಯದ ಪರೀಕ್ಷೆ ಬಹಳ ಚೆನ್ನಾಗಿ ಬರೆಯುತ್ತೇವೆ ಎಂದು ಮನಸನು ಗಟ್ಟಿಗೊಳಿಸಬೇಕು

ಒಟ್ಟಿನಲ್ಲಿ ವಿದ್ಯಾರ್ಥಿಗಳಿಗೆ ಹೇಳುವುದೇನೆಂದರೆ ಓದಿದರೆ ಹೆದರಬೇಡಿ ಹೆದರಿದರೆ ಓದಿದ್ದು ಮರೆಯಾಗಿ ಹೋದಿತು. ನಿಮ್ಮಯ ಕನಸುಗಳನ್ನು ನುಚ್ಚು ನೂರು ಮಾಡಿತು. ಹಾಗಾಗಿ ಓದುತ್ತ ಪರಿಕಲ್ಪನೆಗಳನ್ನು ತಿಳಿದುಕೊಳ್ಳಿರಿ. ಪರೀಕ್ಷೆ ಸಮೀಪಿಸಿದಂತೆ ಮುಖ್ಯ ಅಂಶಗಳತ್ತ ಮಾತ್ರ ಓದನ್ನು ಕೇಂದ್ರೀಕರಿಸಿ ಆಗ ಓದು ಜೊತೆಗಿರುತ್ತದೆ. ಭಯವೂ ದೂರಾಗುತ್ತದೆ. ಸಂತಸವು ಇಮ್ಮಡಿಯಾಗುತ್ತದೆ. ಪರೀಕ್ಷೆಯನು ದಿಟ್ಟತನದಿ ಎದುರಿಸುತ್ತೇವೆ.

ಒಟ್ಟಿನಲ್ಲಿ ಎಲ್ಲ ವಿದ್ಯಾರ್ಥಿಗಳು ಧೈರ್ಯದಿಂದ ಪರೀಕ್ಷೆ ಎದುರಿಸಿ ಭಯವನು ಓಡಿಸಿ, ಶ್ರದ್ಧೆಯಿಂದ ಓದಿದರೆ ಯಶಸ್ಸು ಕಟ್ಟಿಟ್ಟ ಬುತ್ತಿ.

OOO

# ಮುಖವಾಡ



ರಮಾ ಸತೀಶ್

ಇಂದಿನ ಪ್ರಪಂಚದಲ್ಲಿ ಬಹಳಷ್ಟು ಜನ ಮುಖವಾಡ ಧರಿಸಿಯೇ ಬದುಕುತ್ತಿದ್ದಾರೆ.
ಹೊಟ್ಟೆ ಪಾಡಿಗಾಗಿ ಹಾಕುವ ಮುಖವಾಡಗಳು ಕೆಲವರದಾದರೆ, ತಾವು ಒಳ್ಳೆಯವರೆಂದು ತೋರಿಸಿಕೊಳ್ಳಲು ಹಾಕುವ ಮುಖವಾಡಗಳು ಕೆಲವರದು. ಮತ್ತೆ ಕೆಲವರು ತಮ್ಮ ಜೀವನದಲ್ಲಿ ಕಷ್ಟ ಪಡುತ್ತಿದ್ದರೂ, ದುಃಖವನ್ನು ಮರೆತು, ಸಂತೋಷದ ಮುಖವಾಡ ಹಾಕಿ ತಮ್ಮ ಮರ್ಯಾದೆಗೆ ಚ್ಯುತಿ ಬರದಂತೆ ಬದುಕುವವರಿದ್ದಾರೆ. ಹೌದು.....

ಕೆಲವೊಮ್ಮೆ ವಾಸ್ತವ ಜಗತ್ತಿಗೆ ಮುಖವಾಡದ ಅವಶ್ಯಕತೆ ಇದೆ. ಆದರೆ ಹಾಕುವ ಮುಖವಾಡ ಇನ್ನೊಬ್ಬರಿಗೆ ಮೋಸ ಮಾಡುವಂತಿರಬಾರದು. ಇನ್ನೊಬ್ಬರ ನೋವಿಗೆ ಕಾರಣವಾಗದ ಮುಖವಾಡ ಒಳ್ಳೆಯದು.

OOO

# ಕವಿತೆಯೊಂದನು ಬರೆಯುವೆ...



ಹಿತೇಶ್ ಕುಮಾರ್ ಎ

ಅಂಧಕಾರದ ಬಂಧಿಯೊಳಗಿನ
ಶೂನ್ಯತೆಯನು ಕಿತ್ತೆಸೆಯುತಿಹ
ಪದಪುಂಜಗಳ ಸ್ತೋತ್ರವಾಗಲಿ
ಈ ನನ್ನ ಕವಿತೆ...

ಜನಮಾನಸದ ಒಳಿತಿಗಾಗಿ
ಜಗಕೆ ಮಾರ್ಗಸೂಚಿಯಾಗುತಲಿ
ಪ್ರಪಂಚದ ಮೂಢತೆಗೆ ಕೈಗನ್ನಡಿಯಾಗಲಿ
ಈ ನನ್ನ ಕವಿತೆ.!

ಘಾಸಿಗೊಂಡಿಹ ಮನವ
ವಾಸಿ ಮಾಡುವ ಔಷಧಿಯಾಗುತ
ಮುಟ್ಟಲಾಗದ ಹೃದಯವ ತಟ್ಟಲಿ
ಈ ನನ್ನ ಕವಿತೆ...

ಕಷ್ಟದಲಿ ನೊಂದಿರುವ ಜನಕೆ
ಪರಿಹಾರವನು ಹುಡುಕುತಲಿ
ಜನಪರ ನಿಷ್ಠೆಗೆ ಸಹಕಾರಿಯಾಗಲಿ
ಈ ನನ್ನ ಕವಿತೆ.!

ಮೇಲು ಕೀಳೆಂಬ ಭಾವನೆಗೆ
ಪೂರ್ಣ ವಿರಾಮವನು ನೀಡಲು
ಸಮಾನತೆಯ ಶುಭ ನುಡಿಯಾಗಲಿ
ಈ ನನ್ನ ಕವಿತೆ...

ಸಮಾಜದ ಒಳಿತಿಗೆ ಸದಾ
ಆಶಾಕಿರಣವಾಗುವ ತೆರದಿ
ಮಾರ್ಗದರ್ಶಿಯ ಬಲವಾಗಲಿ
ಈ ನನ್ನ ಕವಿತೆ.!

ಭ್ರಷ್ಟರನು ಮಟ್ಟ ಹಾಕಿ
ನೈಜತೆಯನು ತೋರಲು
ಮೌನದ ಘನಘೋರ ಘರ್ಜನೆಯೇ
ಈ ನನ್ನ ಕವಿತೆ...

ಲೇಖನಿಯ ಮೊನಚಿನಲಿ
ಒಗ್ಗಟ್ಟನು ಸಾರಲು
ಅಡವಿಟ್ಟ ಭಾವನೆಯ ರಂಗಪ್ರವೇಶವೇ
ಈ ನನ್ನ ಕವಿತೆ.!

ಜೀವನದ ಉತ್ಸಾಹವ
ಇಮ್ಮಡಿಗೊಳಿಸಲಿರುವ
ಕಷ್ಟ ನಷ್ಟಗಳಿಗೆ ಗುಳಿಗೆಯಾಗಲಿ
ಈ ನನ್ನ ಕವಿತೆ...

ನಮ್ಮತನವನು ಉಳಿಸಿ
ಬೆಳೆಸಿ, ಮುಂದಡಿಯಿಡಲು
ಸಹಾಯಿಸುವ ಮೌಲ್ಯಯುತ
ಮಂತ್ರವಾಗಲಿ
ಈ ನನ್ನ ಕವಿತೆ.!

ooo

# ಪಕ್ಷಿ ಸಂಕುಲಗಳ ಗೆಳೆಯ ಗೋಪಾಲ ಕೃಷ್ಣ



ಡಾ. ವೇದಾವತಿ ಎಸ್ ಬಾಲು

ಪಕ್ಷಿಗಳನ್ನು ಅವುಗಳ ವೈವಿಧ್ಯಗಳನ್ನು ಸೂಕ್ಷ್ಮವಾಗಿ ಗಮನಿಸುವುದು ಹೇಗೆ ಎಂದು ತಿಳಿಯದಿದ್ದರೆ ಅವುಗಳ ಅಗಾದ ವೈವಿಧ್ಯ ನಮಗೆ ಅರಿವಾಗುವುದು ಕಷ್ಟ ಎಂಬ ಪೂರ್ಣಚಂದ್ರ ತೇಜಸ್ವಿಯವರ ವಿಚಾರ ಪೂರ್ಣ ಮಾತುಗಳನ್ನು ಅರ್ಥೈಸಿಕೊಂಡರೆ ಜೀವಸಂಕುಲಗಳ ವೈಶಿಷ್ಟ್ಯತೆಯನ್ನು ಸ್ವಲ್ಪ ಪ್ರಮಾಣದಲ್ಲಾದರೂ ಅರಿಯಲು ಸಾಧ್ಯವಾಗುತ್ತದೆ. ಆಧುನಿಕ ಜೀವನ ಶೈಲಿ ನಮ್ಮ ಸುತ್ತಮುತ್ತಲಿನ ಪರಿಸರವನ್ನು ನೋಡಲು ಅನುಭವಿಸಲು ಆಗದ ಮನೋಭಾವಕ್ಕೆ ತಳ್ಳಿರುವುದಂತೂ ಸುಳ್ಳಲ್ಲ. ಆದರೂ ನಮ್ಮ ಸಮಾಜದಲ್ಲಿ ಕೆಲವು ವ್ಯಕ್ತಿಗಳು ನಮ್ಮ ಬದುಕೇ ದೊಡ್ಡದೆಂದು ಭಾವಿಸದೆ ಪರಿಸರ ಉಳಿಸುವ ಸಂರಕ್ಷಿಸುವ ಮಹತ್ವದ





ಕಾರ್ಯವನ್ನು ಮಾಡುತ್ತಿದ್ದಾರೆ, ಅಂತಹವರಲ್ಲಿ ಒಬ್ಬರು ಡಿ .ಹೆಚ್ . ಗೋಪಾಲಕೃಷ್ಣ ರವರು.

ತುಮಕೂರು ಜಿಲ್ಲೆಯ ನಾಗವಲ್ಲಿಯ ಸಮೀಪದ ಹಳ್ಳಿ ದೊಮ್ಮನಕುಪ್ಪೆ ಗ್ರಾಮದ ಶಾನುಭೋಗ್ ಕುಟುಂಬದ ಕುಡಿ. ವೃತ್ತಿಯಲ್ಲಿ ಪತ್ರ ಬರಹಗಾರರಾಗಿ ತುಮಕೂರು ಜಿಲ್ಲೆಯ ಸಬ್ ರಿಜಿಸ್ಟರ್ ಆಫೀಸಿನಲ್ಲಿ ತಮ್ಮ ಹುದ್ದೆಯನ್ನು ನಿರ್ವಹಿಸುತ್ತಿದ್ದರೂ ಪ್ರವೃತ್ತಿಯಲ್ಲಿ ಪಕ್ಷಿ ಸಂಕುಲಗಳ ಪೋಷಕರು. ವೃತ್ತಿಯ ಸಮಯವನ್ನು ಹೊರತುಪಡಿಸಿ ಉಳಿದ ತಮ್ಮ ಅಮೂಲ್ಯವಾದ ಸಮಯವನ್ನು ಪಕ್ಷಿಗಳಿಗಾಗಿ ಮೀಸಲಿರಿಸಿದ್ದಾರೆ. ಪಕ್ಷಿಗಳ ಬಗ್ಗೆ ಇಷ್ಟೊಂದು ಒಲವು ತೋರಲು ಕಾರಣವೇನು ಎಂದು ಕೇಳಿದಾಗ ಅವರ ಉತ್ತರ ಹೀಗಿತ್ತು, ಮಗಳು ಲಾವಣ್ಯ ಗಾಯಗೊಂಡಿದ್ದ ಒಂದು ಪುಟ್ಟ ಗಿಳಿಯನ್ನು ಆರೈಕೆ ಮಾಡಿ ಸಾಕಿ ಸಲಹಿದ ರೀತಿ

ಅವರ ಮನ ಗೆದ್ದಿತ್ತು. ಆ ಗಿಳಿ ಇದ್ದಷ್ಟು ದಿನ ಅವರ ಮನ ಖುಷಿಯಿಂದ ಕೂಡಿತ್ತು... ಆ ಗಿಳಿಯಿಂದಾಗಿ ಇವರಿಗೆ ಪಕ್ಷಿಗಳ ಬಗ್ಗೆ ಆಸಕ್ತಿ ಮೂಡಿತ್ತು. ಶ್ರೀಯುತರ ಮುಂಜಾವು ಪ್ರಾರಂಭವಾಗುವುದೆ ಹಕ್ಕಿಗಳ ಸೇವೆಯಿಂದ ತಮ್ಮ ಮನೆಯ ಸುತ್ತಲಿನ ಕಾಂಪೌಂಡಿಗೆ ಒಂದು ಅಡಿ ಅಳತೆ ಗೊಂದರಂತೆ ಒಂದೊಂದು ದಪ್ಪ ಮೊಳೆಗಳನ್ನು ಹೊಡೆದು ಅದಕ್ಕೆ ವಿವಿಧ ಬಗೆಯ ಹಣ್ಣುಗಳನ್ನು ಚುಚ್ಚಿರುತ್ತಾರೆ. ಆ ಹಣ್ಣುಗಳನ್ನು ತಿನ್ನಲು ಬರುವ ಪಕ್ಷಿಗಳನ್ನು ನೋಡುವುದೇ ಇವರ ಮನಸ್ಸಿಗೆ ಆನಂದ. ಸೂಕ್ಷ್ಮಭಾವದ ಪಕ್ಷಿಗಳು ಮನುಷ್ಯರ ಹೆಜ್ಜೆ ಸಪ್ಪಳವನ್ನು ಆಲಿಸಿ ಆಹಾರಕ್ಕಾಗಿ ಬರುವುದು... ಪುರನೆ ಹಾರಿಹೋಗುವ ದೃಶ್ಯ ಒಂದು ಕ್ಷಣ ನಮ್ಮನ್ನು ಭಾವನಾ ಪ್ರಪಂಚಕ್ಕೆ ತೇಲಿ ಹೋಗುವ ಹಾಗೆ ಮಾಡುತ್ತದೆ.. ಸೇಬು ಸಪೋಟ ಮುಸುಕಿನ ಜೋಳ ಮುಂತಾದ ಹಣ್ಣುಗಳನ್ನು ಪಕ್ಷಿಗಳು ಎಷ್ಟು ಅದ್ಭುತವಾಗಿ ಕೊಕ್ಕಿನಿಂದ ಕೊರೆದು ತಿಂದು ಅರ್ಧಚಂದ್ರಾಕೃತಿಯ ಸಿಪ್ಪೆಯನ್ನು ಮಾತ್ರ ಉಳಿಸಿ ಹೋಗುವುದು ಬಲು ಸುಂದರ ದೃಶ್ಯ. ನೂರಾರು ಪಕ್ಷಿಗಳು ಒಮ್ಮೆಲೇ ಬಂದು ತಮಗಾಗಿ ಕಾಯುತ್ತಿದ್ದ ಆಹಾರವನ್ನು ಬುಂಜಿಸಿ ಹೋಗುವ ಪರಿ ಅವರ್ಣನೀಯ ..ಪಕ್ಷಿಗಳು ಹಾರಿ ಹೋದ ನಂತರ ಅವು ಕಚ್ಚಿ.. ಸಿಪ್ಪೆ ಉದುರಿಸಿ.. ಹಿಕ್ಕೆ ಹಾಕಿದ ಆ ಜಾಗವನ್ನು ಸ್ವಚ್ಛಗೊಳಿಸಿ ಮತ್ತೆ ಮರುದಿನಕ್ಕಾಗಿ ಅವುಗಳಿಗೆ ವಿವಿಧ ಹಣ್ಣು ಹಂಪಲುಗಳನ್ನು ಎತ್ತಿ ಇಡುವ ಕಾಯಕ ಗೋಪಾಲಕೃಷ್ಣರಿಗೆ ನಿರಂತರ ...

ತುಮಕೂರಿನಿಂದ ಕೆಲಸ ಮುಗಿಸಿ ಬರುವಾಗ ಮರೆಯದೆ ಹಣ್ಣು ಗಳನ್ನು ತರುವ... ಕಾಲವಲ್ಲದ ಕಾಲದಲ್ಲಿ ದೊರೆಯುವ ಕೆಲವು ಹಣ್ಣುಗಳಿಗೆ ವಿಶೇಷ ಬೆಲೆ ನೀಡಿ ತಂದು ಪಕ್ಷಿಗಳಿಗೆ ನೀಡುವ ಮಹತ್ಕಾರ್ಯ ಅವರನ್ನು ಆ ಊರಿನ ಸಲೀಂ ಅಲಿಗೆ ಹೋಲಿಸುವಂತೆ ಮಾಡಿದೆ.. ಇವರ ಈ ಕಾಯಕದಿಂದ ಆ ಊರಿನ ಜನ ಹಲವು ಬಗೆಯ ಪಕ್ಷಿ ಸಂಕುಲಗಳನ್ನು ಕಣ್ತುಂಬಿ ಕೊಳ್ಳುವಂತಾಗಿದೆ ಮುಖ್ಯವಾಗಿ ಚುಕ್ಕೆಬೆಳವಾ.. ಗುಬ್ಬಚಿ ..ಕಾಜಾಣ ..ಗಿಳಿ ..ಮರಕುಟುಕ.. ಗೊರವನಹಕ್ಕಿ..ನೀಲಕಂಠ... ಆಲ್ವಾನ್ ಹಕ್ಕಿ..ಹೀರೇಹಕ್ಕಿ..ಮುಂತಾದ ಪಕ್ಷಿಗಳನ್ನ ರಕ್ಷಿಸುವ ಪೋಷಿಸುವ ಇವರ ವಿಶೇಷ ಆಸಕ್ತಿ ಇವರ ಹೃದಯಕ್ಕೆ ಹಿಡಿದ ಕೈಗನ್ನಡಿಯಂತಿದೆ.. ಯಾರಿಗೆ ನಾವಿರುವರಲ್ಲಿ ಸಂತೋಷ ಉತ್ಸಾಹ ಕುತೂಹಲಗಳಿರುವುದಿಲ್ಲವೋ ಅವರು ಅದನ್ನು ಹುಡುಕಿಕೊಂಡು ಎಲ್ಲಿಗೆ ಹೋಗುವುದು ವ್ಯರ್ಥ ಎಂಬ ಮಾತಿಗೆ ಅನ್ವರ್ಥವಾಗಿರುವವರೇ ಶ್ರೀ ಡಿ. ಎಚ್. ಗೋಪಾಲಕೃಷ್ಣ ಅವರು .ಮಾರ್ಚ್ 24 1970ರಲ್ಲಿ ಶಾನುಭೋಗ ಡಿ. ಎಸ್. ಹನುಮಂತರಾವ್ ಶ್ರೀಮತಿ ಯಶೋಧಮ್ಮನವರ ಸುಪುತ್ರರಾಗಿ ಜನಿಸಿದವರು. ತನ್ನ ತಂದೆಯಂತೆಯೇ ಪರೋಪಕಾರ ಗುಣ ಹೊಂದಿದವರು ..ಊರಿನ ಜನರಿಗೆ ಮಾತ್ರವಲ್ಲದೆ ಸುತ್ತ ಮುತ್ತಲಿನ ಗ್ರಾಮದವರಿಗೂ ಚಿರಪರಿಚಿತರು. ಪ್ರಮುಖ ಪತ್ರ ಬರಹಗಾರರಾದ ಇವರಿಗೆ ತನ್ನ ಹುಟ್ಟೂರು ಎಂದರೆ ಅಚ್ಚುಮೆಚ್ಚು. ಪತ್ನಿ ಪ್ರೇಮಲೀಲಾ ಶಿಕ್ಷಕಿ ..ಮಗ ದರ್ಶನ್.. ಮಗಳು ಲಾವಣ್ಯ ..ಅಳಿಯ ಮನೋಜ್ ಪುಟ್ಟ ಮೊಮ್ಮಗಳೊಂದಿಗಿನ ತುಂಬು ಕುಟುಂಬ ಇವರದು ..ಕಲಾತ್ಮಕ ಕುಟುಂಬದಲ್ಲಿ ಪಕ್ಷಿ ಪ್ರೇಮಿಯಾಗಿ ತಮ್ಮ ಹೆಚ್ಚಿನ ಸಮಯವನ್ನು ಪಕ್ಷಿಗಳಿಗಾಗಿ ಮೀಸಲಿಡುವ ಇವರ ಕಾಯಕ ಹೀಗೆ ಮುಂದುವರೆಯಲಿ ಎಂದು ಆಶಿಸೋಣ.

ooo

# ಮೌನ



ಚಂಪಕ ರಾಘವೇಂದ್ರ

ಈಗೀಗ ನೀನು ಮುನಿಸಿಕೊಂಡು ಮಾತು ಬಿಟ್ಟು
ಮೌನ ಧರಿಸಿದರೂ ನನಗೇನು ಬೇಸರವಿಲ್ಲ ಗೆಳೆಯ
ಕೋಪ ತಾಪವೆಲ್ಲ ಪ್ರೀತಿಯ ಇನ್ನೊಂದು
ಮುಖವೆಂದು ಹೇಳುತಿದೆ ನನ್ನೀ ಹೃದಯ

ನೀ ಆಧರಿಸಿ ಸತ್ಕರಿಸುವೆಯೆಂದಾಗಲಿ
ಓಲೈಸಿ ಹಾಡಿ ಹೊಗಳುವೆಯೆಂದಾಗಲಿ
ನಾನು ನಿರೀಕ್ಷೆ ಮಾಡುವುದಿಲ್ಲ
ನನ್ನ ನಿರೀಕ್ಷೆಗಳನ್ನೆಲ್ಲ ಗಂಟು ಮೂಟೆ ಕಟ್ಟಿ ಅಟ್ಟಕ್ಕೆಸೆದಿರುವೆ

ಇರಲಿ ಬಿಡು ಒಂದಷ್ಟು ಹೊತ್ತು ನೀರವ ಮೌನ
ಒಬ್ಬರನ್ನೊಬ್ಬರು ಅರಿತುಕೊಳ್ಳುವುದಕ್ಕೆ
ಸರಿ ತಪ್ಪುಗಳ ಅವಲೋಕನಕ್ಕೆ
ಮಧುರ ಕ್ಷಣಗಳ ಸಂಕಲನಕ್ಕೆ ಮುನಿದ ದಿನಗಳ ವ್ಯವಕಲನಕ್ಕೆ

ಮೌನವು ಸಂವಹನದ ಒಂದು ಭಾಷೆ
ಕದಡಿದ ಮನದ ತಿಳಿನೀರಿಗೂ
ಕದನ ವಿರಾಮಕ್ಕೂ ಮೌನವೇ ಮದ್ದು
ತಂತಾನೆ ವಾಸಿಯಾಗುವ ಗಾಯದಂತೆ

ooo

# ಲಾಲಿಯ–ಕೇಳುತ



ಕೆ ಎನ್ ರೀನಾ

ಲಾಲಿಯ ಕೇಳುತ ಲೋಲನು ಮಲಗಿದ
ಆಲಸಿ ಸುಂದರ ಗೀತೆಯನು//
ತೇಲಿತು ಕಂಗಳು ಜೋಲಿಯ ಹೊಡೆಯುತ
ಬಾಲನ ತಟ್ಟಲು ಹೊರಳಿದನು//

ಅಮ್ಮನು ನಕ್ಕಳು ಸುಮ್ಮನೆ ನೋಡುತ
ಹೊಮ್ಮಿದೆ ಪ್ರೀತಿಯು ಹೃದಯದಲಿ//
ಹೆಮ್ಮೆಯು ಮನದಲಿ ಡುಮ್ಮಗೆ ಕೆನ್ನೆಯ
ಒಮ್ಮೆಲೆ ಸವರುತ ಕೈಗಳಲಿ//

ವಟವಟ ಮಾತನು ತುಟಿಗಳು ನಿಲ್ಲಿಸಿ
ಹಠವನು ತೊರೆದವು ಮೌನದಲಿ//
ನಟನೆಯ ನೋಟವು ಚಟಪಟ ಒರಗಿತು
ಕಿಟಕಿಯ ದೃಶ್ಯಕೆ ಹೊರಗಿನಲಿ//

ಕಾಲಲಿ ಕಿರುಗೆಜ್ಜೆ ಘಲುಘಲು ಎನ್ನಲು
ಹಾಲಿನ ತಿಂಗಳ ರಾತ್ರಿಯಲಿ//
ಲಾಲನೆ ಗೈಯ್ಯುತ ಬೇಲಿಯ ಹಾಕಿದೆ
ಸಾಲದೆಲೊಲುಮೆಯ ತಂತಿಯಲಿ//

OOO

# ಅಂಗವಿಕಲತೆ ಶಾಪವಲ್ಲ



ಜೈರಾಜ್ ಎ

ಅಂಗವಿಕಲತೆ ಖಂಡಿತ ಶಾಪವಲ್ಲ. ಅದು ದೇವರು ಕೊಟ್ಟ ಒಂದು ವರ ಅನ್ನ ಬಹುದು. ನನಗೆ ಅಂಗವಿಕಲರ ಬಗ್ಗೆ ಅನುಕಂಪ ಮತ್ತು ಕರುಣೆ ಇದೆ. ಸಮಯ ಸಂದರ್ಭ ಬಂದಾಗ ಆ ದೇವರು ಕೊಟ್ಟದ್ದನ್ನು ಯಥಾ ಶಕ್ತಿ ಅಂಥವರಿಗೆ ಕೈಲಾದ ಸಹಾಯ ಮಾಡಿದ್ದೇನೆ ಎನ್ನುವ ತೃಪ್ತಿ ನನಗೆ ಇದೆ. ನೀವೆಲ್ಲ ನೋಡಿರಬಹುದು ಓಡುವ ಬಸ್ಸಿನಲ್ಲಿ,, ಚಲಿಸುವ ಟ್ರೈನಿನಲ್ಲಿ ಅನೇಕರು,,ರಸ್ತೆ ಬದಿಯಲ್ಲಿ ಹಾರ್ಮೋನಿಯಂ ಹಿಡಿದು, ಅಥವಾ ದೇವರ ಹಾಡುಗಳನ್ನು ಹಾಡುತ್ತಾ ಕುಳಿತಿರುವ ವಿಶೇಷ ಚೇತನರನ್ನು (ಅಂಧರು )ನೋಡಿರಬಹುದು. ಹೃದಯವಂತರುಗಳು ನೋಡಿದಾಗ ಕರುಣೆಯಿಂದ,, ಅನುಕಂಪದಿಂದ ಹಣ ಸಹಾಯ ಮಾಡಿರಬಹುದು. ಸಹಾಯ ಮಾಡದೇ ಇರಬಹುದು ದಾನ ಧರ್ಮದ ವಿಚಾರ ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತದೆ. ಅನೇಕ ಅಂಗವಿಕಲರು ನಿಮ್ಮ ಅನುಕಂಪವನ್ನು ಇಷ್ಟಪಡುವುದಿಲ್ಲ ಅದಕ್ಕೆ ಬದಲು ಅವರಿಗೆ ದುಡಿಯುವ ಮಾರ್ಗವನ್ನು ತೋರಿಸಿಕೊಟ್ಟರೆ ನಿಜವಾಗಲೂ ಸಂತೋಷ ಪಡುತ್ತಾರೆ.

ಭಗವಂತ ಚೆನ್ನಾಗಿರುವವರಿಗೆ ಅಂಗಗಳನ್ನು ಸರಿಯಾಗಿ ಕೊಟ್ಟರೂ ಸಹ ಇನ್ನೂ ಏನೋ ಕಡಿಮೆ ಯಾಗಿದೆ ಎಂದು ದೇವರನ್ನು, ದೂಷಿಸುತ್ತಾರೆ,ಅದು ಅವರ ದುರಾಸೆ ಎನ್ನಬಹುದು.. ಇಂತಹ ಮನುಜರು ದೇವರು ಅಂಗಗಳನ್ನು ಒಳ್ಳೆಯ ಕೆಲ್ಸಗಳಿಗೆ ಬದಲಾಗಿ ದುಷ್ಟಕೃತ್ಯ ಗಳಿಗೆ ಬಳಸುತ್ತಾರೆ. ಬಾಯಿಂದ ಕೆಟ್ಟಮಾತುಗಳು,, ನಡೆಯಲು ಕಾಲುಗಳಿಂದ ಇತರರಿಗೆ ಒದೆಯುತ್ತಾರೆ. ಕೊಟ್ಟ ಮೆದುಳಿನಿಂದ ಒಳ್ಳೆಯ ಬುದ್ಧಿಗೆ ಬಳಸದೆ ಒನ್ನೊಬ್ಬರಿಗೆ ಹೇಗೆ ಮೋಸಮಾಡುವ ಎಂದು ಯೋಚಿಸುತ್ತಾರೆ.

ಕೆಲಸ ಮಾಡಲು ಕೊಟ್ಟ ಕೈಗಳಿಂದ ಕೊಲೆ ಸುಲಿಗೆ ಮಾಡುತ್ತಾರೆ. ಮಾಡಬಾರದ ಎಲ್ಲಾ ಕೆಲಸ ಗಳನ್ನು ಮಾಡುತ್ತಾರೆ. ಬೇರೆಯವರ ಜೀವನವನ್ನು ಮೂರಾಬಟ್ಟೆ ಮಾಡಿ ಬೀದಿಗೆ ಬೀಳುವಂತೆ ಮಾಡಿ ಇವರುಗಳು ಶ್ರೀಮಂತರಾಗಿ ಬೆಳೆಯುತ್ತಾರೆ. ರಾಕ್ಷಸ ಗುಣ ಗಳ ಹೊಂದಿದವರ ಸಂಖ್ಯೆ ದಿನೇ ದಿನೇ ಬೆಳೆಯುತ್ತಿದೆ. ಇಂತಹ ಜನಗಳು ಸಮಾಜದ ದೃಷ್ಟಿಯಲ್ಲಿ ಒಂದುರೀತಿಯ ಕೆಟ್ಟ ಕ್ರಿಮಿಗಳು ಅನ್ನಬಹುದು. ಇಂತಹ ಜನಗಳು ಈ ಪುಣ್ಯ ಭೂಮಿಯಲ್ಲಿ ಹುಟ್ಟದಿದ್ರೆ ಇತರರು

ನೆಮ್ಮದಿಯಿಂದ ಬಾಳುತ್ತಿದ್ದರೆನೋ, ಆ ಭಗವಂತನಿಗೇ ಗೊತ್ತು. ಇಂತಹ ಜನಗಳಿಗೆ ಎಲ್ಲ ಅಂಗಗಳು ಇರುವುದೇ ಸಮಾಜಕ್ಕೆ ಒಂದು ಶಾಪವೇನೋ?.

ಅಂಗವಿಕಲತೆ ಒಂದು ಶಾಪವಲ್ಲ. ಖಂಡಿತ ದಯಾಮಯ ದೇವ ಇಂತಹ ವಿಶೇಷ ಚೇತನರಿಗೆ ಏನೋ ಒಂದು ವಿಶೇಷ ಶಕ್ತಿ ವಿದ್ಯೆಯನ್ನು ಕರುಣಿಸಿರುತ್ತಾನೆ. ಅಂಗವಿಕಲತೆಯನ್ನ ಮೆಟ್ಟಿನಿಂತ ಅನೇಕ ಧೀರರು, ಧೀರೆಯರು ನಮ್ಮ ಸುತ್ತಮುತ್ತ ಜೀವಿಸುತ್ತಿದ್ದಾರೆ. ನಮ್ಮ ಸಮಾಜದ ದುಷ್ಟರು ಇವರ ಮಾದರಿ ಯನ್ನಾದರೂ ನೋಡಿ ಒಳ್ಳೆಯವರಾಗಲಿ.

1980ರಲ್ಲಿ ನಾನು ಕೆಲಸ ಮಾಡುತ್ತಿದ್ದ ಐ ಟಿ ಐ ಫ್ಯಾಕ್ಟರಿ ಯಿಂದ ಮೂರು ತಿಂಗಳು ವಿವಿಧ CROSS BAR ಟೆಲಿಫೋನ್ ಎಕ್ಸ್ಚೇಂಜ್ ಗಳಲ್ಲಿ ರಿಪೇರಿ ಕೆಲಸಗಳನ್ನು ಮಾಡಲು ಮತ್ತೆ ಮೂರು ಜನ ಸಹಾಯಕರನ್ನು ನನ್ನ ಜೊತೆ ಕಳಿಸಿದ್ದರು. ಆಗ ನಾವು ಮುಂಬಯಿಯ ವಿವಿಧ ಬಡಾವಣೆ ಗಳಲ್ಲಿ ಕೆಲಸ ಮಾಡಿದೆವು. ಆಗ ಬೈಕುಲ ಎನ್ನುವ ಬಡಾವಣೆಯಲ್ಲಿ. ಒಂದು ವಾರ ಇದ್ದೆವು. ಅಲ್ಲಿ ಒಂದು ಅಂಧರಿಗೆ ತರಬೇತಿ ಕೊಡುವ ಶಾಲೆ ಇದ್ದಿತು. ಇಲ್ಲಿನ ಅಂಧ ವಿದ್ಯಾರ್ಥಿ ಗಳಿಗೆ brail ಲಿಪಿ ,,ಮತ್ತು ಅನೇಕ ಎಚ್ಚರಿಕೆ ಕ್ರಮಗಳನ್ನು,,, ಟ್ರಾಫಿಕ್ ನಲ್ಲಿ ಹೇಗೆ ಓಡಾಡಬೇಕು ಎಂಬುದರ ಸೂಕ್ಷ್ಮ ವನ್ನೆಲ್ಲಾ ಕಲಿಸುತ್ತಾರೆ. ಇಲ್ಲಿನ ಅನೇಕ ವಿದ್ಯಾರ್ಥಿ ಗಳು ಯಾವ ತೊಂದ್ರೆಯೂ ಇಲ್ಲದೆ bombay ಯಂತ ಬ್ಯುಸಿ ಟ್ರಾಫಿಕ್ ನಲ್ಲೂ ನಿರಾತಂಕವಾಗಿ ಓಡಾಡುವುದನ್ನು ನೋಡಿದರೆ ಆಶ್ಚರ್ಯ ವಾಗುತ್ತಿತ್ತು. ಬಸ್ಸುಗಳಲ್ಲಿ, ಎಲೆಕ್ಟ್ರಿಕ್ ಟ್ರೈನ್ ಗಳಲ್ಲಿ ಓಡಾಡುತ್ತ ಅವರವರ ಬಡಾವಣೆ ತಲುಪುತ್ತಿದ್ರು. ಇವ್ರುಗಳ ಕೈಲಿ ಒಂದು white cane ಇರುತ್ತದೆ. ಬಾಂಬೆ ಜನರದು ತುಂಬ fast life. ಅವಸರ ಜಾಸ್ತಿ. ನಮಗೇ ಹೊಂದಿಕೊಳ್ಳ ಲು ಸಮಯ ಬೇಕಾಯಿತು.

ಒಮ್ಮೆ ದೆಹಲಿಯಿಂದ ಬೆಂಗಳೂರಿಗೆ ಬರುತ್ತಿದ್ದೆ ನಮ್ಮ ಬೋಗಿಯಲ್ಲಿ ಒಬ್ಬ ತರಬೇತಿದಾರ ಮೇಸ್ಟ್ರು ಮತ್ತು 10/15ಜನ ಅಂಧರೂ ಸಹ ಇದ್ದರು. ಅವ್ರುಗಳು ದೆಹಲಿಯಲ್ಲಿ ಅಂಧರ ಕ್ರಿಕೆಟ್ ಮ್ಯಾಚ್ ಮುಗಿಸಿಕೊಂಡು ವಾಪಸ್ ಆಗುತ್ತಿದ್ದರು.

ನಾನು 1966 ರಲ್ಲಿ iti ಫ್ಯಾಕ್ಟರಿಗೆ ಸೇರಿದೆ ಬಸ್ ಪಾಸ್ ಇರಲಿಲ್ಲ ಆಗಿನ bts bus ನಲ್ಲಿ ಕೃ.ರಾ ಮಾರ್ಕೆಟ್ನಿಂದ ಡ್ಯೂಟಿಗೆ ಬರುತ್ತಿದ್ದೆನು. ಅಲಸೂರಿನಲ್ಲಿಒಬ್ಬ ಅಂಧ ಮನುಷ್ಯ ಒಂದು ಕೈಕೋಲು ಹಿಡಿದುಕೊಂಡು ಬಸ್ ಹತ್ತುತ್ತಿದ್ದ, ಎಲ್ಲರಿಗೂ ನಮಸ್ಕಾರ ಹೇಳಿ ಅಂದಿನ ತಾರೀಖು ಮತ್ತು ವಾರ ಹೇಳಿ. ನಂತರ ದಾರಿಯಲ್ಲಿ ಬರುತ್ತಿದ್ದ ನಿಲ್ದಾಣ ಗಳ ಹೆಸರನ್ನು ತಪ್ಪಿಲ್ಲದೆ ಹೇಳುತ್ತಿದ್ದ. ಯಾರನ್ನೂ ಬೇಡುತ್ತಿರಲಿಲ್ಲ ಯಾರಾದರು ಕಾಸು ಕೊಟ್ಟರೆ ಇಸಿದುಕೊಳ್ಳುತ್ತಿದ್ದ. ಫ್ಯಾಕ್ಟರಿ ಯಲ್ಲಿಯೂ 8/ 10 ಜನ ಅಂಧರು ಕೆಲಸ ಮಾಡುತ್ತಿದ್ದರು. ಅವರಲ್ಲಿ ಉತ್ತಮ ಕೆಲಸದವ್ರು ಅನ್ನೋ ಪ್ರಶಸ್ತಿಗಳು ದೊರೆತಿವೆ .

ವಿಕಲಚೇತನರಲ್ಲಿ ಮಾನ್ಯ ಶ್ರೀ ದಿ. ಪುಟ್ಟರಾಜಗವಾಯಿಗಳು. ಸ್ವತಃ ತಾವೇ ಅಂಧರಾಗಿದ್ದರೂ ಸಹ ಸಾವಿರಾರು ಅಂಧ ವಿದ್ಯಾರ್ಥಿ ಗಳಿಗೆ ವಿದ್ಯೆ ಮತ್ತು ಸಂಗೀತ ಕಲಿಸಿ ಅವರ ಕಾಲ ಮೇಲೆ ಅವರು ನಿಂತು ಸ್ವತಂತ್ರವಾಗಿ ಜೀವನ ಮಾಡುವಂತೆ ಮಾಡಿ ಅವ್ರಿಗೆಲ್ಲಾ ದಾರಿದೀಪವಾಗಿದ್ದಾರೆ. ಈ ಗುರುಗಳು ನಿಜಕ್ಕೂ ಪ್ರಾತಃಸ್ಮರಣೀಯರು.
ವಿಶೇಷ ಚೇತನರಲ್ಲಿ ಅನೇಕ ಕ್ರಿಡಾ ಪಟುಗಳಿದ್ದಾರೆ. ನೃತ್ಯಪಟುಗಳಿದ್ದಾರೆ, ಸಂಗೀತಗಾರರಿದ್ದಾರೆ, ಈಜುಗಾರರಿದ್ದಾರೆ, ಉತ್ತಮ ಬಿಲ್ಲುಗಾರರಿದ್ದಾರೆ. ಅನೇಕ ಬ್ಯಾಂಕ್ ಗಳಲ್ಲೂ ಉನ್ನತ ಹುದ್ದೆ ಹೊಂದಿದ್ದಾರೆ. ಲೆಕ್ಚರರ್ ಗಳು ಇದ್ದಾರೆ.

ಒಮ್ಮೆ ಬಿಎಂಟಿಸಿ ಬಸ್ನಲ್ಲಿ ಹೋಗುವಾಗ ಪಕ್ಕದಲ್ಲಿ ಒಬ್ಬ ಅಂಧ ವಿದ್ಯಾರ್ಥಿ ಕುಳಿತಿದ್ದನು. ವಿಚಾರಿಸಲು ಆತ final B.com ಓದುತ್ತಿದ್ದನು. ಅವನ ಆಸೆ ಇನ್ನೂ ಮುಂದೆ ಓದಿ ಐಎಎಸ್,, ಅಥವ kas exam ಪಾಸು ಮಾಡಿ ಒಳ್ಳೆಯ ಹುದ್ದೆಮಾಡುವ ಯೋಚನೆ ಇದೆ. ಹಾಗೆ ಕೆಲಸ ಸಿಕ್ಕಾಗ ಅವನ ತರಹದ ಅಂಧ ವಿದ್ಯಾರ್ಥಿ ಗಳಿಗೆ ಓದಲು ಸಹಾಯ ಮಾಡುವ ಆಸೆ ಇದೆ ಎಂದು ತಿಳಿಸಿದಾಗ ಅವನ ಆದರ್ಶ ಗಳನ್ನು ನೋಡಿ ಸಂತೋಷ ವಾಯಿತು...ನಾನು ಆ ವಿದ್ಯಾರ್ಥಿಗೆ 100/ರೂಪಾಯಿ ಪ್ರೀತಿಯ ಕಾಣಿಕೆ ಕೊಡಲು ಮುಂದಾದಾಗ ಬೇಡಿ ಸಾರ್ ಎಂದು ಸ್ವಾಭಿಮಾನ ಮೆರೆದನು. ನಂತರ ಬಲವಂತ ಮಾಡಿ ಕೊಟ್ಟೆನು. *ಯಾವುದೊ ಶೋ ನಲ್ಲಿ ನೋಡಿದ ನೆನಪು ಸುಧಾ ಚಂದ್ರನ್ ಪ್ರಸಿದ್ಧ ಭರತ ನಾಟ್ಯ ನೃತ್ಯ ಪಟು ಇವರಿಗೆ ಒಂದುಕಾಲು ಇಲ್ಲ ಜಯಪುರದ ಕಾಲನ್ನು ಹಾಕಿಕೊಂಡು dance ಮಾಡುತ್ತಾರೆ.

*ಇನ್ನೊಂದು ಹುಡುಗಿ ಅವಳಿಗೆ ಮಂಡಿಯಿಂದ ಆಚೆಗೆ ಬಲ ಕಾಲು ಅಪಘಾತ ದಲ್ಲಿ ಊನವಾಗಿದೆ ಆಕೆ hand cluches ತೆಗೆದು ಪಕ್ಕಕಿಟ್ಟು ಅದ್ಭುತವಾಗಿ ಹಿಂದಿ ಸಿನಿಮಾ ಹಾಡಿಗೆ ನೃತ್ಯ ಮಾಡಿ ಎಲ್ಲರು ಬಾಯ ಮೇಲೆ ಕೈ ಇಟ್ಟುಕೊಳ್ಳುವಂತೆ ಮಾಡಿ ಮೆಚ್ಚುಗೆ ಗಳಿಸಿದಳು. ಇವಳ ಧೈರ್ಯ ವನ್ನು ಮೆಚ್ಚಬೇಕು. ವಿಡಿಯೋ ನೋಡುವಾಗ ಕಣ್ಣುಗಳು ತೇವಗೊಂಡವು.
* ಬೆಂಗಳೂರಿನ ಸಮರ್ಥನಮ್ ಸಂಸ್ಥೆಯ ಕಂಪ್ಯೂಟರ್ ತರಬೇತಿದಾರರ ಪ್ರಕಾರ ಅವರು ತಪ್ಪಿಲ್ಲದೇ type ಮಾಡುತ್ತಾರಂತೆ, Tele calling,.,.air/bus ticket booking ಎಲ್ಲಾ ಕೆಲಸ ಮಾಡುತ್ತಾರಂತೆ, ಸ್ವತಃ ಅಡುಗೆ ಕೂಡಾ ಮಾಡಿಕೊಳುತ್ತಾರಂತೆ. ನಾವುಗಳು ಯಾವ ಕೆಲಸಕ್ಕೂ ಯಾರ ಮೇಲು ಅವಲಂಬಿತರಾಗೋಲ್ಲ ಎಂದರು.
* ನೀವುಗಳು ಅಂಧ ವ್ಯಕ್ತಿ ಗಳನ್ನು ಕಂಡಾಗ ಬಸ್ ನಲ್ಲೂ ಕುಳಿತುಕೊಳ್ಳಲು, ರಸ್ತೆದಾಟಲು, ಅವ್ರುಗಳಿಗೆ ವಿದ್ಯೆ ಕಲಿಯಲು ಸಹಕರಿಸಿ. ಅವರುಗಳು ಪರೀಕ್ಷೆ ಬರೆಯಲು ಅವರ ಪರವಾಗಿ ನೀವು ಬರೆಯಿರಿ.
* ವಿಕಲ ಚೇತನರಿಗೆ ನಮ್ಮಂತಯೇ ಬಾಳ ಬದುಕಲು ಸಹಕರಿಸಿ. ಬದುಕುವ ದಾರಿ ತೋರಿಸಿ.
* ಬೆಂಗಳೂರಿನ ಸಮರ್ಥನಮ್ ಟ್ರಸ್ಟ್ ನ ಸಂಸ್ಥಾಪಕರಾದ dr. Mahaantesh ಹಾಗೂ ನಡೆಸುತ್ತಿರುವವರು ಸಹ partial blind. ಇಲ್ಲಿಯವರೆಗೆ 3 ಲಕ್ಷ ಅಂಧರಿಗೆ ಮಾರ್ಗದರ್ಶನ ಮಾಡಿ ಸ್ವಯಂ ಉದ್ಯೋಗಸ್ತರನ್ನಾಗಿ ಮಾಡಿದ ಹೆಮ್ಮೆ ಅವರದು. ಅನೇಕರಿಗೆ ಒಳ್ಳೆಯ ಸಂಸ್ಥೆ ಗಳಲ್ಲಿ ಕೆಲಸ ಕೊಡಿಸಿದ್ದಾರೆ.

ooo

# ಪರೀಕ್ಷೆ



ಚೇತನಾ ಭಾರ್ಗವ

ಪುಟ್ಟನ ಪರೀಕ್ಷೆಯ ದಿನವು ಹತ್ತಿರ ಬಂದಿತ್ತು
ಪರೀಕ್ಷೆಗೆ ತಯಾರಿಯೂ ಭರದಿಂದ ಸಾಗುತ್ತಿತ್ತು
ಓದಿ ಓದಿ ಸಾಕಾಗಿ ಹೋಗಿತ್ತು
ಚಹಾ ನೋಡಿದೊಡನೆ ಉತ್ಸಾಹ ಹೊರಹೊಮ್ಮಿತ್ತು

ಮರೆತು ಹೋಗುವುದೆಂಬ ಭಯ ಕಾಡುತ್ತಿತ್ತು
ನಾಳೆಯೇ ಪರೀಕ್ಷೆಯೆಂದು ಉದ್ವೇಗ ಹೆಚ್ಚಾಯಿತು
ಏನು ಓದಲಿ ಎಂದು ತಿಳಿಯದಾಯಿತು
ಅಮ್ಮನ ಕೂಗುತ ಕಣ್ಣಂಚು ಒದ್ದೆಯಾಯಿತು

ಪರೀಕ್ಷೆಯ ಭಯ ಬೇಡ ಕಂದ ನಿನ್ನೊಂದಿಗೆ ನಾನಿರುವೆನಲ್ಲ
ತಿಳಿಯದ ಪಾಠದ ಅರ್ಥೈಸಿ ಹೇಳಿ ಕೊಡುವೆನಲ್ಲ
ಎನ್ನುತ ಅಮ್ಮನು ಬೆರಳಿಟ್ಟು ಓದಿಸಲು ಶುರು ಮಾಡಿದಳು
ಆಟದೊಂದಿಗೆ ಪಾಠವ ಕಲಿಸಿ ಆತ್ಮವಿಶ್ವಾಸವ ಹೆಚ್ಚಿಸಿದಳು

ಕಡಿಮೆ ಆಯಿತು ಪುಟ್ಟನ ಪರೀಕ್ಷೆಯ ಆತಂಕ
ನಿರ್ಧರಿಸಿದ ತೆಗೆಯುವೆ ಒಳ್ಳೆಯ ಅಂಕ
ಪುಸ್ತಕ ಪೆನ್ನುಗಳನು ಮೇಜಿನ ಮೇಲೆ ಜೋಡಿಸಿಟ್ಟ
ಸಂತೋಷದಿ ಪರೀಕ್ಷೆಯ ಬರೆಯಲು ಶಾಲೆಗೆ ಹೊರಟುಬಿಟ್ಟ

OOO

# ಲೈಫು ಇಷ್ಟೇನೇ!?



ಕೈರುನ್ನಿಸಾ ನದಾಫ್

ರೋಹನ್ ಒಂದು ಚಿಕ್ಕ ಹಳ್ಳಿಯಲ್ಲಿ ಹುಟ್ಟಿ ಬೆಳೆದವನು. ಬಾಲ್ಯದಿಂದಲೂ ದೊಡ್ಡ ಕನಸುಗಳನ್ನಿಟ್ಟುಕೊಂಡವನು. ತಾನೊಬ್ಬ ಉತ್ತಮ ಐಎಎಸ್ ಅಧಿಕಾರಿಯಾಗಬೇಕು. ಜನರ ಸಮಸ್ಯೆಗಳಿಗೆ ಪರಿಹಾರ ಕೊಡಬೇಕು, ಸಮಾಜಕ್ಕೆ ಸೇವೆ ಮಾಡಬೇಕು ಎಂಬುದು ಅವನ ಕನಸು.

ರೋಹನ್ ನ ತಂದೆ ಕೂಲಿ ಕಾರ್ಮಿಕ, ತಾಯಿ ಮನೆಯ ಕೆಲಸ ಮಾಡುತ್ತಾ ಮಕ್ಕಳನ್ನು ನೋಡಿಕೊಳ್ಳುತ್ತಿದ್ದಳು. ಹಣಕಾಸಿನ ತೊಂದರೆಗಳ ನಡುವೆ ಕೂಡ, ರೋಹನ್  ಓದುವದರಲ್ಲಿ ಅತ್ಯುತ್ತಮನಾಗಿದ್ದ. ಬೆಳಕಿಲ್ಲದ ರಾತ್ರಿ, ಹೊಟ್ಟೆಕಿಚ್ಚಿನ ದಿನಗಳು, ಎಲ್ಲವನ್ನೂ ಸಹಿಸಿಕೊಂಡು, ಆತ ಕಠಿಣ ಪರಿಶ್ರಮದಿಂದ ಎಂಎ ಪದವೀಧರನಾದ.

ಐಎಎಸ್ ಪರೀಕ್ಷೆ ಸುಲಭವಲ್ಲ. ಮೊದಲ ಪ್ರಯತ್ನದಲ್ಲಿ ವಿಫಲನಾದರೂ, ಅವನು ಹಿಂತಿರುಗಲಿಲ್ಲ. ಹಗಲು ಬೆಳಕಿನಲ್ಲಿ ಅಶ್ರುಗಳನ್ನು ಮುಚ್ಚಿಟ್ಟು, ರಾತ್ರಿ ಹೊತ್ತಿಗೆ ಪುಸ್ತಕಗಳ ಜಗತ್ತಿನಲ್ಲಿ ಮುಳುಗಿದ. ತಾನು ಉಸಿರಾಡೋ ಪ್ರತಿಯೊಂದು ಕ್ಷಣವೂ ಪರೀಕ್ಷೆ ತಯಾರಿಗಾಗಿ ಮುಡಿಪಿಟ್ಟ.ಹತ್ತಾರು ದುಃಖ, ಅಪಮಾನದ ಹೊಡೆತಗಳು. ಸ್ನೇಹಿತರು ಕೆಲಸಕ್ಕೆ ಸೇರಿಕೊಂಡರು, ಕೆಲವರು ಮದುವೆಯಾದರು, ಆದರೆ ರೋಹನ್ ಪಾಸಾಗಲು ಹೋರಾಟ ಮಾಡುತ್ತಿದ್ದ. ಎಷ್ಟೋ ಬಾರಿ ನೊಂದ ಮನಸ್ಸಿನಿಂದ "ನಾನು ಈ ಕನಸು ಬಿಟ್ಟರೆ?" ಎಂಬ ಯೋಚನೆ ಬಂದರೂ, ಅಮ್ಮನ ಕಣ್ಣೀರನ್ನು ನೆನೆದು ಆತ ಮತ್ತೆ ಪ್ರಯತ್ನಿಸುತ್ತಿದ್ದ.

ಹತ್ತು ವರ್ಷಗಳ ನಿರಂತರ ಪ್ರಯತ್ನದ ನಂತರ, ಕೊನೆಗೂ ವರೋಹನ್ UPSC ಪಾಸಾಗಿ, ಐಎಎಸ್ ಅಧಿಕಾರಿಯಾಗಿ ಆಯ್ಕೆಯಾದ! ಮನೆಯವರು, ಸ್ನೇಹಿತರು, ಹಳ್ಳಿ ಜನ ಎಲ್ಲರೂ ರೋಹನ್ ನನ್ನು ಅಭಿನಂದಿಸಿದರು. ಆತನ ತಾಯಿ ಗಗನಕುಸುಮಿತಳಾದಳು. ಮನೆ ತುಂಬಾ ಸಂಭ್ರಮ, ನಗುವಿನ ಹಬ್ಬ.

ಒಂದು ದಿನದ ಬಳಿಕ ಅವನು ಅಧಿಕೃತವಾಗಿ ಅಧಿಕಾರಕ್ಕೆ ಹಸ್ತಕ್ಷೇಪ ಮಾಡಬೇಕಿತ್ತು. ಎಲ್ಲವೂ ಕನಸು ನನಸು ಆಗಿ, ಹೊಸ ಜೀವನಕ್ಕೆ ಓಲೈಸುತ್ತಿದ್ದಾಗ...

ಆ ದಿನ ಸಂಜೆ, ಅವನು ತಾಯಿಯ ಜೊತೆ ಮಾತನಾಡುತ್ತಿದ್ದ. "ಅಮ್ಮ, ಇನ್ಮುಂದೆ ನೀನು ದುಡಿಯುವ ಅವಶ್ಯಕತೆಯಿಲ್ಲ? ನಾನು ಎಲ್ಲವನ್ನೂ ನೋಡಿಕೊಳ್ಳುತ್ತೀನಿ!"ಎಂದೇಳಿದ ಮಗನನ್ನು ನೋಡಿ ರೋಹನ್ ನ ತಾಯಿ ಸಂತೋಷದಿಂದ ಕಣ್ಣೀರಿಡುತ್ತಿದ್ದಳು.

ಆ ರಾತ್ರಿ, ಸ್ನೇಹಿತರು ಏರ್ಪಡಿಸಿದ್ದ ಸಣ್ಣ ಕೂಟಕ್ಕೆ ಹೋಗಿದ್ದ ರೋಹನ್ ಹಿಂತಿರುಗಿ ಬರುವಾಗ ನಡೆದ ಭೀಕರ ಅಪಘಾತದಲ್ಲಿ ತನ್ನ ಜೀವವನ್ನೇ ಕಳೆದುಕೊಂಡ. ಹೌದು! ರೋಹನ್ ಸ್ಥಳದಲ್ಲಿಯೇ ಪ್ರಾಣ ಬಿಟ್ಟ!

ಮರುದಿನ, ಇಡೀ ಊರೇ ನಂಬಲಾಗದ ಆಘಾತದಲ್ಲಿತ್ತು. ಎಲ್ಲರಿಗೂ ಮಾದರಿಯಾಗಿದ್ದ ರೋಹನ್ ಇಂದು ತನ್ನ ಆಸೆಯನ್ನು ನೆರವೇರಿಸುವ ಮುನ್ನವೇ ದೇವರಿಗೆ ಪ್ರಿಯವಾಗಿಬಿಟ್ಟ. ಅವನ ಶವವನ್ನು ನೋಡಿದ ತಾಯಿಯ
ಬಾಯಿಂದ ಒಂದೇ ಮಾತು ಬಂತು:

"ಮಗಾ, ನೀನು ಗೆದ್ದಿದ್ದೀಯಾ, ಆದರೆ ಹೋಯಿತೋ ನನ್ನ ಕನಸು...!"

ರೋಹನ್ ನ ದಾರುಣ ಅಂತ್ಯ ಎಲ್ಲರ ಹೃದಯ ಕಲುಕಿದರೂ, ಅವನ ಜೀವನ ಪ್ರೇರಣಾದಾಯಕ ಅಧ್ಯಾಯವಾಯಿತು. ಜೀವನ ಅನಿಶ್ಚಿತ. ನಾವು ಎಷ್ಟೇ ಪ್ಲಾನ್ ಮಾಡಿದ್ರು , ವಿಧಿಯ ಆಟದ ಮುಂದೆ ಎಲ್ಲವೂ ತೃಣಕ್ಕೆ ಸಮಾನ. ಅಸಹಾಯಕತೆಗೆ ಅಚ್ಚರಿಯ ತಿರುವು ನೀಡುವ ಅನಿಯಂತ್ರಿತ ಪಯಣವೇ ಜೀವನ.

ರೋಹನ್ ಹಸಿವು, ಸೋಲು, ನಿರಾಕರಣೆಗಳ ನಡುವೆ ಎಂದೂ ಕೂಡ ನಿರಾಸೆಗೊಳಗಾಗಲಿಲ್ಲ. ಅವನ ಕನಸು, ಶ್ರಮ ಲ್ಲವೂ ಫಲ ನೀಡಿತು. ಆದರೆ ಬದುಕು ನಿಜಕ್ಕೂ ವಿಚಿತ್ರ—ಅವನ ಗೆಲುವಿನ ನಗೆ ಮನೆ ತುಂಬುವ ಮುನ್ನವೇ, ದುಃಖದ ಮಳೆಯಾಯಿತು.

ನಾವು ಜೀವನದ ಪ್ರತಿಯೊಂದು ಕ್ಷಣವನ್ನು ಸಾರ್ಥಕವಾಗಿ ನಡೆಸಬೇಕು. ನಾಳೆಯ ಬಗ್ಗೆ ಚಿಂತಿಸುವ ಬದಲು, ಇಂದು ನಾವು ಎಷ್ಟು ಸುಂದರವಾಗಿ ಬದುಕಬಹುದು ಎಂಬುದರ ಮೇಲೆ ಗಮನ ಹರಿಸಬೇಕು. ನಾವು ಕಂಡ ಕನಸನ್ನು ನನಸಾಗಿಸಲು ಹೋರಾಡಬೇಕು ಆದರೆ ಆ ಹೋರಾಟದ ನಡುವೆ ಬದುಕಿನ ಪ್ರತಿಯೊಂದು ಕ್ಷಣವನ್ನು ಜೀವಿಸಲು ಮರೆತು ಹೋಗಬಾರದು.

ಮುಂಜಾನೆಯ ಬೆಳಕಿಗಾಗಿ ರಾತ್ರಿಯ ಕತ್ತಲನ್ನು ಎದುರಿಸಲೇ ಬೇಕು ಹಾಗೆಯೇ ನಾವು ನಮ್ಮ ಗುರಿಯನ್ನು ತಲುಪುವ ಹಾದಿಯನ್ನು ಸ್ವಲ್ಪ ಶಾಂತಿ, ಸಂತಸದಿಂದ ಸವೆಸಬೇಕು. ಯಾರಿಗೆ ಗೊತ್ತು, ಮುಂದಿನ ಕ್ಷಣ ಏನಾಗಲಿದೆ??

ಹೌದು, "ಲೈಫು ಇಷ್ಟೇನೆ!"—ಜೀವನ ಅರ್ಥಹೀನವಲ್ಲ, ಆದರೆ ಅರ್ಥ ಹುಡುಕುತ್ತಾ ಬದುಕುವುದೇ ಅದನ್ನು ಸುಂದರಗೊಳಿಸುತ್ತದೆ!

ooo

# ಸ್ತ್ರೀ



ಪುಷ್ಪಾ ರಾಥೋಡ್

ಅಡಿಗಡಿಗೆ ನಿಂದನೆಯ ಸಹಿಸಿ
ಸೌಹಾರ್ದದ ಅಡುಗೆಯ ಬಡಿಸಿ
ಕರುಣೆ ಸಹನೆಗಳಲಿ ಅಡಗಿರುವೆ.
ಆಸೆ ಕನಸುಗಳ ತ್ಯಜಿಸಿ ಕಲ್ಲು ಕಟ್ಟಡಗಳನು
ಮನೆಯಾಗಿಸಿಹೆ ಪ್ರೀತಿಯ ಧಾರೆ ಹನಿಸಿ.
ಅರಿಯೆನು ಗದ್ಯ, ಸಾಹಿತ್ಯ ಪ್ರಕಾರ.
ತಿಳಿಯೆನು ಪದಗಳ ವರ್ಣನೆ ವಿಸ್ತಾರ.
ಅತೀ ಸೂಕ್ಷ್ಮ ನನ್ನ ಭಾವನೆಗಳ ಸಾಗರ.
ಆತ್ಮ ಗೌರವದ ಅಭಾವದಿ ಚಿಂತಿತಳಾಗಿರುವೆ.
ನನ್ನ ಅಸ್ತಿತ್ವದಿ ನಾ ವಂಚಿತಳಾಗಿರುವೆ.
ನನ್ನ ಛಾಯೆಯಿಂದಲೇ ಅಪರಿಚಿತಳಾಗಿರುವ
ನಾನೊಬ್ಬಳು ಸ್ತ್ರೀ ಸಾಧಾರಣ ಸ್ತ್ರೀ...

೦೦೦

# ಬದುಕು ಇದು ಸುಂದರ

ಪ್ರಬಂಧ



ಹಮೀದಾಬೇಗಂ ದೇಸಾಯಿ

ಈ ವಿಶಾಲವಾದ ಪೃಥ್ವಿ ಉತ್ಪತ್ತಿಯಾದಾಗಿನಿಂದ ಕೋಟಿ ಗಟ್ಟಲೆ ಜೀವಿಗಳ ಉಗಮವಾಗಿದೆ. ಬರಿಗಣ್ಣಿಗೆ ಕಾಣಲಾರದ ಸೂಕ್ಷö◌್ಮ ಜೀವಿಗಳನ್ನು ಹಿಡಿದು, ದೈತ್ಯಾಕಾರಾದ ಪ್ರಾಣಿಗಳವರೆಗೆ ಅತ್ಯಂತ ತೆಳುವಾದ ಸೂಕ್ಷö◌್ಮ ಸಸ್ಯಗಳಿಂದ ಹಿಡಿದು ಬೃಹತ್ ವೃಕ್ಷ ಸಮೂಹಗಳವರೆಗೆ ಪ್ರಕೃತಿಯು ಜೀವ ಕಳೆ ತುಂಬಿದೆ. ಅವುಗಳಲ್ಲಿ ಚೈತನ್ಯ ಮೂಡಿಸಿದೆ ಜೀವನವನ್ನು ಕೊಟ್ಟಿದೆ ಪ್ರತಿಯೊಂದು ಜೀವಿಗೆ ತನ್ನದೇ ಆದ ರೀತಿಯಲ್ಲಿ ಬದುಕುವ ಹಕ್ಕಿದೆ ಆದರೆ ಮಾನವನ ಜೀವನ ವೈಖರಿಯೇ ಬೇರೆ ಉಳಿದ ಜೀವಿಗಳಿಗಿಂತ ಆತ ಭಿನ್ನವಾಗಿ ನಿಲ್ಲಲು ಆತನ ಬುದ್ಧಿ ಶಕ್ತಿಯೇ ಕಾರಣ ತನ್ನ ಬದುಕನ್ನು ಸುಂದರಗೊಳಿಸುವುದಕ್ಕಾಗಿ ಅನೇಕ ವೈವಿಧ್ಯತೆಗಳನ್ನು ರೂಪಿಸಿಕೊಂಡ ಮಹಾಜಾಣ ಈತ ನಮ್ಮ ಬದುಕು ಸುಂದರವಾಗಲು ಅಥವಾ ಅದು ವಿರೂಪಗೊಳ್ಳಲು ನಾವೇ ಕಾರಣರು ಹೊರತಾಗಿ ಅನ್ಯ ಯಾವುದೇ ಕಾರಣಗಳಲ್ಲ " ಸುತ್ತಲೇನೋ ಸೌಂದರ್ಯವಿದೆ, ಆದರೆ ನೋಡುವ ದೃಷ್ಟಿ ಬೇಕು" ಎಂದು ಒಬ್ಬ ಕವಿ ಹೇಳುತ್ತಾನೆ. ಜೀವನವೂ ಹಾಗಯೇ ! ನಾವು ಯಾವ ದೃಷ್ಟಿಯಿಂದ ಅದನ್ನು ನೋಡುತ್ತೇವೆಯೋ ಹಾಗೇ ಅದನ್ನು ಅನುಭವಿಸುತ್ತೇವೆ. ಬದುಕಿನಲ್ಲಿ ಅನೇಕ ಘಟನೆಗಳು ನಡೆಯುತ್ತವೆ. ಕೆಲವು ಸಂತೋಷಕರವಾಗಿದ್ದರೆ, ಹಲವು ವಿಷಾದನೀಯಯವೂ ಇರಬಹುದು ಆದರೆ ವಿಷಾದ ಸಂಗತಿಗಳನ್ನೇ ಮನದಲ್ಲಿಟ್ಟುಕೊಂಡು ಮರಗುವುದಕ್ಕಿಂತ, ಮನಸ್ಸಿಗೆ ಮುದ ನೀಡುವ ಸಂತೋಷಕರ ಕ್ಷಣಗಳನ್ನು ಮೆಲಕು ಹಾಕುವುದು ಉತ್ತಮವಲ್ಲವೇ?

ಜಗತ್ತಿನಲ್ಲಿ ಯಾವೂದು ಕಷ್ಟ್ಟದಲ್ಲ, ಕಷ್ಟಗಳನ್ನು ಎದುರಿಸುವ ಎದೆಗಾರಿಕೆ ನಮ್ಮಲ್ಲಿರಬೇಕು. ಅದಕ್ಕೆ ಸಂಸ್ಕಾರವೂ ಅಗತ್ಯ 'ಅನುಭವವಿದ್ದಲ್ಲಿ ಅಮೃತತ್ವವಿದೆ' ಎಂಬ ಮಾತನ್ನು ಪ್ರತಿಯೊಬ್ಬನೂ ತನ್ನ ಬದುಕಿನಲ್ಲಿ ನೆನಪಿಡಡಬೇಕಾದದು ಅವಶ್ಯ ವೇದಾಂತಿಗಳ ಮಾತಿನಂತೆ " ಮಾನವನ ಜನ್ಮ ಹುಟ್ಟಿ ಬರುವುದು ದುರ್ಲಭ" ಅಂಥ ಜನ್ಮವನ್ನು ಸುಂದರವಾಗಿ ರೂಪಿಸಿಕೊಂಡು, ಸಾರ್ಥಕಗೊಳಿಸುವುದು ನಮ್ಮ ಧರ್ಮ, ಕರ್ತವ್ಯವಾಗಿದೆ. ಆಕಾಶದಲ್ಲಿ ಯಾವಾಗಲೂ ಕಾರ್ಮೋಡಗಳೇ ಇರುತ್ತವೆಯೇ? ನದಿ ಯಾವಾಗಲೂ ನೇರವಾಗಿಯೇ ಪ್ರವಹಿಸುತ್ತದೆಯೇ? ಹಸಿರು ಮರ ಯಾವಾಗಲೂ ಹಸಿರಾಗಿಯೇ ಇರುವುದೆ? ಇಲ್ಲವಲ್ಲ.

ಕಾಲಕಾಲಕ್ಕೆ ಅವು ಕೂಡಾ ಬದಲಾಯಿಸುವುದಿಲ್ಲವೇ? ಜೀವನವು ಕೂಡಾ ಬದಲಾವಣೆಗಳ ಒಂದು ಸರಣಿ. ಇದೊಂದು ಸುಧೀರ್ಘ ಪಯಣ. ಪ್ರಾರಂಭ ತೊಟ್ಟಿಲಿನಲ್ಲಿ ಕೊನೆ ಸ್ಮಶಾನದಲ್ಲಿ ಈ ನಡುವಿನಲ್ಲಿ ನಾವು ಎಷ್ಟೊ ಜನರನ್ನು ಸಂಧಿಸುತ್ತೇವೆ. ಆದರೆ ನಮಗಾಗುವವರು ನಮ್ಮ ಕೈ ಮುಷ್ಟಿಯಲ್ಲಿ ಹಿಡಿಸುವಷ್ಟು ಮಾತ್ರ. ಅವರು ನಮ್ಮ ಹತ್ತಿರದವರಿರಬಹುದು, ಅಥವಾ ಹೊರಗಿನವರಿರಬಹುದು. ಆದÀ ಮಾತ್ರಕ್ಕೆ ಇಡೀ ಜಗತ್ತೇ ನಮಗೆ ಶತ್ರುವಾಗುವುದಿಲ್ಲಾ.

ದೇವರು ನಮಗೆ ಬಾಳ ಬದುಕಲು ಬೇಕಾದ ಬಹುಮೂಲ್ಯ ಶರೀರ, ಮನಸ್ಸು, ವಿಚಾರ ಶಕ್ತಿಗಳನ್ನು ಧಾರಾಳವಾಗಿ ಕೊಟ್ಟಿದ್ದಾನೆ. ಅದನ್ನು ಸರಿಯಾಗಿ ಉಪಯೊಗಿಸಿಕೊಳ್ಳುವ ಜವಾಬ್ದಾರಿ ನಮ್ಮದು. ಸರಿಯಾದ ಮಾರ್ಗದಲ್ಲಿ, ಸೂಕ್ತ ರೀತಿಯಲ್ಲಿ ಇನ್ನೊಂದು ಜೀವಿಗೆ ನೋವಾಗದಂತೆ ನಡೆದುಕೊಂಡಾಗ ನಮ್ಮ ಬದುಕು ಸುಂದರವಾದÀತೆ ನಮ್ಮ ಪರಿಸರವು ಸುಂದರವಾಗಿ ಕಾಣುತ್ತದೆ. ಹಿಂದಿಯ ಹೆಸರಾಂತ ಕವಿ ಸುಮಿತ್ರಾನಂದನ ಪಂತರು ಒಂದು ಕಡೆ ಹೇಳುತ್ತಾರೆ.

ಕುಚ್ ದು:ಖ್ ಕೆ ಮಧುರ್ ಮಿಲನ್ ಸೆ
ಯಹ್ ಜೀವನ್ ಪರಿಪೂರಣ್

ಜೀವನವೇ ಇಲ್ಲದಿದ್ದರೆ ಜಗತ್ತು ನಮಗೆ ಶೂನ್ಯವೇ ಸರಿ. ಇದ್ದುದ್ದರಲ್ಲಿ ತೃಪ್ತಿ ಪಡುವ ಅತಿ ಆಸೆ ಪಡದೆ ಎಲ್ಲವನ್ನು ಸಮನಾಗಿ ಸ್ವೀಕರಿಸುವ ಮನಸ್ಸು, ಎದೆಗುಂದದ ಧೈರ್ಯ ಬಾಳಿನ ನಿಶ್ಚಿತ ಗುರಿ, ಅಚಲ ನಿರ್ಧಾರ, ಮನೋಬಲ ತಾಳ್ಮೆ ಇವೆಲ್ಲ ಬಾಳಿನ ಹಂದರವನ್ನು ಸುಂದರವಾಗಿಸುವ ಗಟ್ಟಿ ಕಂಬಗಳು.

ಪುರಾತನ ಕಾಲದಿಂದಲೂ ಸುಖೀ ಜೀವನಕ್ಕಾಗಿ ಎಷ್ಟೋಜನ ವಿವಿಧ ರೀತಿಗಳನ್ನು ಅಳವಡಿಸಿಕೊಂಡರು. ರಾಜಮಹಾರಾಜರು ತಮ್ಮ ವಿಲಾಸೀ ಜೀವನಕ್ಕಾಗಿ ಕೋಟಿಗಟ್ಟಲೇ ಹಣ ಖರ್ಚು ಮಾಡಿದ್ದಾರೆ. ಯುದ್ಧಗಳನ್ನು ಸಾರಿದ್ದಾರೆ. ಪ್ರಾಣಗಳನ್ನು ತೆತ್ತಿದ್ದಾರೆ. ಆದÀರೆ ಅದು ನಿಜವಾಗಿಯೂ ಅವರಿಗೆ ಮನಃಶಾಂತಿಯನ್ನು ನೀಡಿತೆ? ಬದುಕು ಸುಂದರವಾಗಬೇಕಾದರೆ ದುಡ್ಡು ಅಂತಸ್ತು, ವೈಭವಗಳು ಸಹಕಾರಿಯಲ್ಲ. ವಿಶಾಲ ಮನಸ್ಸಿರಬೇಕು. ನಿರ್ವಿಕಾರ ಭಾವಬೇಕು. ಚಂಚಲತೆಯನ್ನು ಮೆಟ್ಟಿ ನಿಲ್ಲುವ ಧೃಡ ಚಿತ್ತ ಬೇಕು. ಅಂದಾಗ ಮಾತ್ರ ನೆಮ್ಮದಿ ದೊರೆತು ಬದುಕು ಸುಂದರವಾಗುತ್ತದೆ. ಮುರುಕು ಗುಡಿಸಲಿನಲ್ಲಿರುವ ಬಡವನ ಬದುಕು ಹೊರ ನೋಟಕ್ಕೆ ಹರಕಾಗಿ ಕಂಡರೂ, ಆತ ಬದುಕನ್ನು ಸುಂದರ ವಾಗಿಸಿಕೊಂಡು ನೆಮ್ಮದಿಯಾಗಿ ಬಾಳುವವನಾಗಿರುತ್ತಾನೆ. ಒಬ್ಬ ಶ್ರೀಮಂತ ಎಲ್ಲ ಸೌರ್ಯ – ಸೌಲಭ್ಯಗಳನ್ನು ಹೊಂದಿದ್ದರೂ, ಹೃದಯದ ಒಂದು ಮೂಲೆಯಲ್ಲಿ ಅಶಾಂತಿಯ ನೋವನ್ನು ಹೊಂದಿ ಬದುಕನ್ನು ನೀರಸವಾಗಿ ಮಾಡಿಕೊಂಡಿರುತ್ತಾನೆ. ಒಬ್ಬ ಕಲಾವಿದನ ಕುಂಚಕ್ಕೆ ಸಿಲುಕಿದ ಒಂದು ಮುಳ್ಳುಗಿಡ ಕೂಡ ರಂಗುರÀಗಿನ ಸೌಂರ್ಯ ಹೊಂದಿ ಜೀವಂತಿಕೆ ಪಡೆಯುತ್ತದೆ. ಒಬ್ಬ ಅರಸಿಕನ

ಕೈಯಲ್ಲಿ ಚೆಂಗುಲಾಬಿ ಹೂವು ಕೂಡ ನಿರ್ವರ್ಣಗೊಳ್ಳುತ್ತದೆ. ಅದಕ್ಕಾಗೇ ಸರ್ವಜ್ಞ ಹೇಳುತ್ತಾನೆ –

ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ
ರಸಿಕನಲ್ಲದವನ ಮಾತು ಕಿವಿಗೆ ಕೂರ್ದಸಿಯು ಬಡಿದಂತೆ ಸರ್ವಜ್ಞ

ಎಂಥ ಸ್ಥಿತಿಯಲ್ಲೂ ಹರ್ಷಚಿತ್ತಾರಾಗಿ ಇರುವುದು ನೆಮ್ಮದಿಯ ಬದುಕಿನ ಪ್ರಥಮ ಮೆಟ್ಟಿಲು. ಬಾಳು ಹೋಳಾಗದೆ, ಹಾಳಾಗದೆ ಇರಲು ಅದು ಸುಗಮಮಾರ್ಗ. ಅದಕ್ಕೆ ಡಿ. ವಿ. ಜಿ ಯವರು ಒಂದು ಕಡೆ ಹೀಗೆ ಹೇಳುತ್ತಾರೆ.

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ಮಳೆಯ ವಿಧಿಸುರಿಯೆ ।
ಬೆಲ್ಲ ಸಕ್ಕರೆಯಾಗು ದೀನದುರ್ಬಲರಿಗೆ
ಎಲ್ಲರೊಳಗೊಂದಾಗು ಮಂಕುತಿಮ್ಮ ॥

ಬಾಳು ಜೇಂಗೊಡವಿದ್ದAತೆ ಅದನ್ನು ಹನಿ–ಹನಿಯಾಗಿ ಸೇವಿಸಿದರೇನೇ ರುಚಿಯಾಗಿ, ದೇಹಕ್ಕೆ ಒಳ್ಳೆಯದನ್ನು ಮಾಡುತ್ತದೆ ಬೊಗಸೆಯಿಂದ ಕುಡಿಯಲಾಶಿಸಿದರೆ ರುಚಿಗೆಟ್ಟು, ಕೆಡುಕಾಗಬಹುದು ವಾಸ್ತವ್ಯತೆಯನ್ನು ತೋರುವುದು ಬಾಳು, ಸತ್ಯದ ಪ್ರತಿರೂಪ ಬಾಳು ದೇವತ್ವವನ್ನು ಪಡೆಯಲು ಪೂರಕ ಬಾಳು ! ಅದಕ್ಕೆ ಜ್ಞಾನಿಗಳು ಹೇಳುವುದು ಜೀವನ ಸತ್ಯಂ–ಶಿವA–ಸುAದರA. ಒಬ್ಬ ಯೋಗಿ ತನ್ನ ಯೋಗ ಸಾಧನೆಗೈಯಲು, ಒಬ್ಬ ಸಂಸಾರಿ ತನ್ನ ಸಂಸಾರದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು, ಒಬ್ಬ ಭಕ್ತ ತನ್ನ ಭಕ್ತಿಯನ್ನು ಅರ್ಪಿಸಲು ಸಾಧನ ಬೇಡವೆ ? ಅದುವೇ ಜೀವನ ತನ್ನ ಜೀವನದ ಅವಧಿಯಲ್ಲಿ ತನಗೆ ಬೇಕಾದ ಸಾಧನೆಗಳನ್ನು ಪೂರೈಸಿಕೊಳ್ಳಲು ಒಂದು ಮಾಧ್ಯಮ ಬೇಡವೆ ? ಅದುವೆ ಅವನ ಜೀವನ, ಬಾಳುವೆ, ಸಾಧನೆ । ದುಶ್ಚಟಗಳಿಂದ ವ್ಯಸನಾಧೀನರಾಗಿ ಎಷ್ಟು ಜನ ತಮ್ಮ ಬಾಳಿನ ಜೊತೆಗೆ ಇನ್ನಿತರರ ಬಾಳನ್ನು ನರಕವನ್ನಾಗಿ ಮಾಡಿಲ್ಲ ? ಸೇಡಿನ ಕಿಚ್ಚಿನಲ್ಲಿ ಸಿಲುಕಿ ತಮ್ಮ ಹಾಗೂ ತಮ್ಮವರ ಬಾಳುಗಳನ್ನು ಬೆಂದುಬೂದಿ ಮಾಡಿಲ್ಲ ? ಸ್ವಾರ್ಥದ ಬೆನ್ನು ಹತ್ತಿ ಎಷ್ಟು ಜನ ತಮ್ಮ ಬಾಳನ್ನು ಹಾಳು ಮಾಡಿಕೊಂಡಿಲ್ಲ ? ಬದುಕು ಸುಂದರವಾಗಬೇಕಾದರೆ ಇಂಥ ಲೌಕಿಕ, ಕ್ಷಣಿಕ ಸುಖಗಳನ್ನು ತ್ಯಜಿಸಬೇಕಾಗುತ್ತದೆ 'ಜಗವೆಲ್ಲ ನಗುತಿರಲಿ, ಜಗದಳುವು ನನಗಿರಲಿ' – ಎಂಬ ತ್ಯಾಗ ಮನೋಭಾವದಿಂದ ಮನುಷ್ಯನ ಮನಸ್ಸು ತೃಪ್ತಿ ಹೊಂದುತ್ತದೆ. ತೃಪ್ತಿ ಇದ್ದಲ್ಲಿ ಬದುಕು ನಿರಾಳವಾಗುತ್ತದೆ, ಸೌಂರ್ಯ ಪಡೆಯುತ್ತದೆ. ಅದಕ್ಕ ಹಿರಿಯ ಕವಿ ಬೇಂದ್ರೆ ಹೇಳುತ್ತಾರೆ – ರಸವೆ ಜನನ, ವಿರಸವೇ ಮರಣ, ಸಮರಸವೇ ಜೀವನ – ಎಂದು ಯಾವುದಕ್ಕೂ ಹೊಂದಿಕೊAಡು ಬಾಳಿದರೆ ಅದು ಸ್ವರ್ಗ–ಸಮಾನ. ಮಾನವ ಶರೀರವೊಂದು ತಂಬೂರಿ. ಮನ, ವಚನ, ರ್ಮ ಈ ಮೂರು ಅದರ ತಂತಿಗಳು – ಇವು ಸರಿಯಾಗಿ ನುಡಿದಾಗ ಬಾಳು ಸಂಗೀತಮಯವಾಗುತ್ತದೆ.

ಇಲ್ಲವಾದರೆ ಅಪಸ್ವರ ಹೊರಡುತ್ತದೆ, "ನೋಡಿದಷ್ಟು ಕಣ್ಣು ತಿದ್ದುತ್ತದೆ, ನೋಡುತ್ತಿರಬೇಕು, ಚಿಂತಿಸಬೇಕು, ತಿಳಿದುಕೊಳ್ಳಬೇಕು ಅಂದರೆ ಮನಸ್ಸು ಸಂಸ್ಕಾರಗೊAಡು ಬದುಕು ಸುಂದರವಾಗುತ್ತದೆ" – ಡಾ॥ ಶಿವರಾಮ ಕಾರಂತರ ಈ ಮಾತು ನಿಜಕ್ಕೂ ಶತಃ ಸಿದ್ಧವಾದುದು; ಅನುಭವದಿಂದ ಹರಳುಗಟ್ಟಿದ ಮಾತಿದು ! ಇರುವೆಗಳ ಜೇನ್ನೊಣಗಳ ಬದುಕಿನ ಪಾಠ ನಮ್ಮ ಸುಂದರ ಜೀವನಕ್ಕೆ ನಾಂದಿ. ನಿರಾಶಾವಾದಿ ಆಗದೆ ಆಶಾವಾದವನ್ನು ಹೊಂದಿದರೆ, ಸೋಲು–ಗೆಲುವುಗಳನ್ನು ಸಮಾನವಾಗಿ ಜೀವನದಲ್ಲಿ ತೆಗೆದುಕೊಂಡರೆ ಬದುಕು ಸುಂದರ ಇಲ್ಲದಿದ್ದರೆ ದುರ್ಭರ.

ಸಾನೆ ಗುರೂಜಿಯವರ ಅಭಿಪ್ರಾಯದಂತೆ – "ಜೀವನವು ಸುಂದರವು ಯಶಸ್ವಿಯೂ ಆಗಬೇಕಾದರೆ ಪ್ರೇಮ, ಜ್ಞಾನ ಮತ್ತು ಬಲ ಈ ಮೂರು ಗುಣಗಳ ಅವಶ್ಯಕತೆ ಇದೆ" ನೆಮ್ಮದಿಯ ಮನಸ್ಸೇ ಸುಖಜೀವನ, ಜೀವನವೆಂದರೆ ನಾವು ಪರಿಸ್ಥಿತಿಯೊಡನೆ ಮಾಡಿಕೊಂಡ ಒಪ್ಪಂದ. ಬದುಕು ಎನ್ನುವುದು ನಮ್ಮ ಆತ್ಮ ಪರೀಕ್ಷೆಯ ಸಾಧನ ಮಾತ್ರ. ಜೀವನದ ಉದ್ದೇಶ ಚೆನ್ನಾಗಿ ಬಾಳ ಬದುಕುವುದು ಜೀವನ ಕನ್ನಡಿ ಇದ್ದಂತೆ ನಕ್ಕರೆ ನಗುತ್ತದೆ, ಅತ್ತರೆ ಅಳುತ್ತದೆ ಜೀವನ ಬಹಳ ಚಿಕ್ಕದು, ಆದ್ದರಿಂದ ಅದನ್ನು ಆದಷ್ಟು ಚೊಕ್ಕವಾಗಿ, ಆನಂದವಾಗಿ ಕಳೆಯಬೇಕು. ಜೀವನಕ್ಕಿಂತ ಜೀವನ ಹೋರಾಟವು ಹೆಚ್ಚು ಆಕರ್ಷಕವಾಗಿದೆ. ಗೌರವದಿಂದ ಬದುಕುವುದೆ ಸುಂದರ ಜೀವನ ಪ್ರಕೃತಿಯ ಸಮಸ್ತ ಚೇತನ – ಅಚೇತನ ವಸ್ತುಗಳಲ್ಲಿ ಚೆಲುವನ್ನು ಕಾಣುವ ಸಂಸ್ಕಾರವೇ 'ಜೀವನ'. ಮೂಡಣದಲ್ಲಿ ಉದಯಿಸುವ ಬೆಳಗಿನ ಸರ‍್ಯನನ್ನು ಕಂಡಾಗ ಮಳೆಗಾಲದಲ್ಲಿ ನವಿಲ ನರ್ತನ ನೋಡಿದಾಗ, ಕೋಗಿಲೆಯ ಮಧುರ ಕಂಠ ಕೇಳಿದಾಗ, ಮಂಜು ಹನಿಯ ಸೊಗಸು ಹೊಳಪನ್ನು ಅನುಭವಿಸಿದಾಗ ಜೀವನ ಸೌಂರ‍್ಯ ಪ್ರಜ್ಞೆ ಜಾಗರಣಗೊಳ್ಳುತ್ತದೆ. ಶುಷ್ಕವಾಗುತ್ತಿರುವ ಇಂದಿನ ಯಾಂತ್ರಿಕ ಜೀವನದಲ್ಲಿ ದುಡಿದು ಹಣ್ಣಾದ ಜೀವಕ್ಕೆ ಪ್ರಕೃತಿಯ ದರುಶನ ಸಂಜೀವಿನಿಯಾಗುತ್ತದೆ. ನಿಸರ್ಗದ ಈ ಕೃಪೆಯನ್ನು ಕುರಿತೇ ಆಂಗ್ಲ ಕವಿ ವಡ್ಸÀðವರ್ತ ಹೇಳಿದ ಮಾತುಗಳು ಚಿರನೂತನ :

"Our cheerful faith that all which be behold is full of blessings"

ಪ್ರಸಿದ್ಧ ಸಾಹಿತಿ ಮ್ಯಾಕ್ಸಮುಲ್ಲರ್ ಹೇಳಿಕೆಯಂತೆ "ಇರುಳಿನಲ್ಲಿ ಕತ್ತಲೆ ಕವಿದಷ್ಟು ನಕ್ಷತ್ರದ ಕಾಂತಿ ಹೆಚ್ಚುತ್ತದೆ". ಹಾಗೆಯೇ ನಮ್ಮ ಜೀವನ ಕೂಡ ಕಾರ್ಯವನ್ನು ಸಾಧಿಸುವ ಧೀರರು ಸುಖ ದುಃಖಗಳನ್ನು ಎಣಿಸುವುದಿಲ್ಲ. ನಮ್ಮ ಬಾಳುವೆ ಸೂರ್ಯನಂತಾಗಬೇಕು. ಸೂರ್ಯನು ಕೆಂಪಾಗಿ ಹುಟ್ಟುತ್ತಾನೆ, ಕೆಂಪಾಗಿಯೇ ಅಸ್ತಂಗತನಾಗುತ್ತಾನೆ. ಅಂದರೆ ಸಂಪತ್ತಿರಲಿ, ವಿಪತ್ತು ಬರಲಿ, ಸುಖ ಬರಲಿ, ಕಷ್ಟ ಬರಲಿ, ಎಲ್ಲದರಲ್ಲೂ ಒಂದೇ ಸ್ವರೂಪ ಹಾಗೆಯೇ ಜೀವನ ಕೂಡ ಸುಂದರ.

ooo

# ಸಣ್ಣ ಬದಲಾವಣೆ



ಲಾವಣ್ಯ ಜೀವನ್

ನಾನು ಶಶಿಧರ್, ನನ್ನ ಪತ್ನಿಯ ಹೆಸರು ಶಶಿಕಲಾ. ನನ್ನನ್ನ ಮೊದಲಿನಿಂದಲು ಶಶಿ ಅಂತ ಕರೆಯುತ್ತಿದ್ದರು. ಇವಳನ್ನು ಅವಳ ಮನೆಯಲ್ಲಿ ಶಶಿ ಅಂತಾನೇ ಕರೆಯುತ್ತಿದ್ದರು. ಕೊನೆಗೆ ಇವಳು ನಮ್ಮ ಮನೆಯಲ್ಲಿ ಕಲಾ ಆದಳು.

ನಾನು ಬಹಳ ಶಿಸ್ತಿನ ಮನುಷ್ಯ. ಬ್ಯಾಂಕ್ ನೌಕರಿಯಲ್ಲಿದ್ದೆ. ದಿನ ನಿತ್ಯ ವ್ಯಾಯಾಮ, ಮಾಡುತ್ತೀನಿ. ತಿಂಡಿ, ಊಟ ಎಲ್ಲಾ ಸರಿಯಾದ ಸಮಯದಲ್ಲಿ ಆಗಬೇಕು. ನನ್ನದು ಸ್ವಲ್ಪ ಜಾಸ್ತಿಯೇ ಅನ್ನುವಂತೆ ಸಮತೋಲನದ ಆಹಾರದ ಪದ್ಧತಿ.(ಡಯಟ್ ಫುಡ್ ). ಸ್ವಭಾವತಃ ನಾನು ಮಾತು ಬಹಳ ಕಡಿಮೆ. ಬಂಧು ಬಳಗದವರು ಸೇರಿದಾಗ ಏನಾದರು ನನ್ನ ಆಸಕ್ತಿಯ ವಿಷಯ ಇದ್ದರೆ ನನ್ನ ಮಾತುಗಳಿರುತ್ತಿತ್ತು. ಇಲ್ಲವೆಂದರೆ ಅವರುಗಳಾಡುವ ಮಾತುಗಳನ್ನ ಕೇಳಿ ಸಂತೋಷಪಡುತ್ತಿದ್ದೆ. ಆದರೆ ಅದು ಅವರಿಗೆಲ್ಲ ಅರ್ಥವೇ ಆಗುತ್ತಿರಲಿಲ್ಲ. ಶಶಿ ಬಿಡು ಬಹಳ ಗಂಭೀರ ಸ್ವಭಾವದವನು ಅನ್ನುವ  ಮಾತು ಕೂಡ ನನಗೆ ಸ್ವಲ್ಪ ಗರ್ವವನ್ನೇ ತಂದು ಕೊಟ್ಟಿತ್ತು ಅಂದರು ತಪ್ಪಿಲ್ಲ.

ನನ್ನ ಗುಣಗಳಿಗೆ ತದ್ವಿರುದ್ಧದ ಗುಣ ನನ್ನ ಹೆಂಡತಿ ಕಲಾಳದ್ದು. ಸದಾ ಮಾತಾಡುತ್ತಾ (ನನ್ನ ಪ್ರಕಾರ ವಟಗುಟ್ಟುತ್ತಾ) ಇರುತ್ತಾಳೆ. ಅವಳಿಗೆ ಮಾತನಾಡಲು ವಿಷಯವೇ ಬೇಡ. ಬೆಳಗ್ಗೆ ಮನೆ ಮುಂದೆ ಬರುವ ಹಸು, ಕರು, ನಾಯಿ, ಬೆಕ್ಕುಗಳ ಜೊತೆಯು ಮಾತಾಡುತ್ತಾಳೆ. ಗಿಡಗಳು, ಮಲ್ಲಿಗೆ ಬಳ್ಳಿಯೊಂದಿಗೂ ಮಾತಾಡುತ್ತಿರುತ್ತಾಳೆ. ಏನು ಮಾತಾಡುತ್ತಾಳೆ ಅಂತ ನನಗೆ ಅರ್ಥವೇ ಆಗುತ್ತಿರಲಿಲ್ಲ. ಇಡೀ ಬೀದಿಯವರು ಅವಳಿಗೆ ಸ್ನೇಹಿತರು. ಸಣ್ಣ ಮಗುವಿನಿಂದ ಹಿಡಿದು, ಶಾಲೆಯ ಮಕ್ಕಳು, ವಯಸ್ಸಾದವರೊಂದಿಗು ಇವಳ ಮಾತುಕತೆ ಇರುತ್ತೆ. ಮನೆ ಮುಂದೆ ಬರುವ ತರಕಾರಿ, ಸೊಪ್ಪು ತೊಗೊಳ್ಳಲು ಇವಳು ಹೋದರೆ, ಅವರುಗಳೋ ಇವಳ ಹತ್ತಿರ ತಮ್ಮ ಕಷ್ಟ ಸುಖ ಹೇಳಿಕೊಂಡು ಮನಸ್ಸು ಹಗುರ ಮಾಡಿಕೊಳ್ಳುತ್ತಾರೆ. ಅದಲ್ಲದೆ ಇಡೀ ಬೀದಿಯವರು ಸೇರಿಕೊಂಡು ಕಡಿಮೆ ಎಂದರು ಅರ್ಧಮುಕ್ಕಾಲು ಗಂಟೆ ಮಾತಾಡ್ತಾ ನಿಲ್ಲುತ್ತಾರೆ. ಸಣ್ಣ ವಿಷಯವನ್ನು ಸಂಭ್ರಮಿಸುತ್ತಾಳೆ. ಒಂದು ಹಕ್ಕಿ ನೋಡಿದರು, ಹೂವು ನೋಡಿದರು, ಅಕ್ಕ ಪಕ್ಕದ ಮನೆಯವರು ಒಂದು ಸಣ್ಣ ತುಂಡು ಹೂವು ಕೊಟ್ಟರು ಅವಳಿಗೆ ಸಂಭ್ರಮ, ಊಟ ತಿಂಡಿಯ ವಿಷಯದಲ್ಲೂ ಅಷ್ಟೇ ಇಂತದ್ದೇ ಆಗಬೇಕೆಂದೇನು ಇಲ್ಲ. ಏನಿದ್ದರು

ಅದನ್ನೇ ಸಂತೋಷದಿಂದ ತಿನ್ನುತ್ತಾಳೆ. ನನ್ನ ಪುಣ್ಯ ಮಕ್ಕಳಿಬ್ಬರಿಗು ಅವಳ ಸ್ವಭಾವವೇ ಬಂದಿದೆ.

ಅವಳ ಜೊತೆ ಏನಾದರು ವಾಯುವಿಹಾರಕ್ಕೆ ಹೋದರೆ ಇಡೀ ಬೀದಿಯವರೊಂದಿಗೆ ಕಾಫೀ ಆಯಿತಾ ತಿಂಡಿ ಆಯಿತಾ ಅನ್ನುವ ಮಾತು ಮುಗಿಸಿ ನಮ್ಮ ಬೀದಿ ದಾಟಲು ಏನಿಲ್ಲವೆಂದರು ಇಪ್ಪತ್ತು ನಿಮಿಷ ಬೇಕು. ಹಾಗಾಗಿ ನಾನೊಬ್ಬನೇ ಹೋಗುತ್ತೇನೆ. ಅವಳ ಪಾಡಿಗೆ ಅವಳು ಎಲ್ಲಾರನ್ನು ಮಾತನಾಡಿಸಿಕೊಂಡು ತರಕಾರಿ ಹಣ್ಣು ತೂಗೊಂಡು ಬರುವಾಗ ಏಳುವರೆ ಆಗುತ್ತೆ. ಅವಳು ನನಗೆ ಯಾವಾಗಲು ಹೇಳೋದು ಒಂದೇ ಮಾತು, ಏನಾದರು ಮಾತಾಡ್ತಾ ಇರಿ.... .. ...ನನಗಂತು ನಿಮ್ಮ ಹಾಗೆ ಮೂಗು ಬಸವನ ತರಹ ಇರಲು ಸಾಧ್ಯವೇ ಇಲ್ಲಪ್ಪಾ , ನಿಮ್ಮ ಹಾಗೆ ಇದ್ದರೆ ನನ್ನ ತಲೆನೇ ಕೆಟ್ಟು ಹೋಗುತ್ತದೆ ಅಂತ ಹೇಳುತ್ತಿರುತ್ತಾಳೆ.

ರಿಟೈರ್ಡ್ ಆಯಿತು. ಮಕ್ಕಳಿಬ್ಬರು ಬೆಂಗಳೂರಿನಲ್ಲಿ ಕೆಲಸದಲ್ಲಿದ್ದಾರೆ. ಒಮ್ಮೆ ಸಣ್ಣ ಮಗ ಬಂದವ ನಿಮ್ಮಿಬ್ಬರಿಗು ವಯಸ್ಸಾಗುತ್ತಾ ಇದೆ, ಒಮ್ಮೆ ವೈದ್ಯಕೀಯ ಪರಿಕ್ಷೆ ಮಾಡಿಸೋಣವೆಂದ. ನನಗೆ ಏನು ತೊಂದರೆ ಇರುವುದಿಲ್ಲ ಎನ್ನುವ ವಿಶ್ವಾಸದಿಂದಲೇ ಹೋದೆ. ಇವಳು ಸ್ವಲ್ಪ ದಪ್ಪ ಇದಿದ್ದರಿಂದ ಏನಾದರು ಸಣ್ಣ ಪುಟ್ಟ ಸಮಸ್ಯೆ ಇದ್ದರು ಇರಬಹುದೇನೋ ಅಂತ ಯೋಚಿಸುತ್ತಾ ಅವರು ಹೇಳಿದ ಪರೀಕ್ಷೆಗಳನ್ನೆಲ್ಲ ಮಾಡಿಸಿದೆವು. ವೈದ್ಯರು ಎಲ್ಲಾ ವರದಿಯೊಂದಿಗೆ ಮಾರನೆಯ ದಿನ ಬಂದು ಭೇಟಿ ಮಾಡಲು ಹೇಳಿದ್ದರು.

ಮಾರೆನೆಯ ದಿನ ವೈದ್ಯರನ್ನು ಭೇಟಿಯಾದಾಗ, ಅವರು ವರದಿಯನ್ನು ಕೂಲಂಕುಷವಾಗಿ ನೋಡಿ, ನಿಮ್ಮ ಪತ್ನಿಯ ಆರೋಗ್ಯ ಚೆನ್ನಾಗಿ ಇದೆ. ನಿಮಗೆ ಸ್ವಲ್ಪ ರಕ್ತದೊತ್ತಡ ಹಾಗು ಸಕ್ಕರೆ ಖಾಯಿಲೆ ಪ್ರಾಥಮಿಕ ಹಂತದಲ್ಲಿದೆ ಅಂದಾಗ ಇದು ಹೇಗೆ ಸಾಧ್ಯ ಅಂತ ನಿಜವಾಗಲು ಆಶ್ಚರ್ಯ ಆಯಿತು. ನನ್ನ ಶಿಸ್ತು ಬದ್ಧ ಜೀವನದ ವಿವರಣೆಯನ್ನ ಅವರಲ್ಲಿ ಹೇಳಿಕೊಂಡಾಗ..... ಪಕ್ಕದಲ್ಲೇ ಕುಳಿತಿದ್ದ ನನ್ನ ಪತ್ನಿ, ಈ ಅವಕಾಶಕ್ಕೆ ಕಾಯುತ್ತಿದ್ದಳು ಅಂತ ಕಾಣತ್ತೆ ಅಲ್ಲಿಯೂ ವೈದ್ಯರೊಂದಿಗೆ ಮಾತನಾಡಲು ಶುರುಮಾಡಿದಳು. ಅವಳು ಅಷ್ಟು ಹೊತ್ತು ಹೇಳಿದ್ದು ನನ್ನ ಮೇಲೆ ದೂರೊಂದೇ....... ಇವರು ಮಾತಾಡಲ್ಲ, ಜಾಸ್ತಿ ನಗುವುದಿಲ್ಲ ಇತ್ಯಾದಿ ಇತ್ಯಾದಿ.......

ಇವಳ ಮಾತನ್ನು ಅಷ್ಟು ಸಹನೆಯಿಂದ ಪೂರ್ತಿ ಕೇಳಿಸಿಕೊಂಡ ವೈದ್ಯರು, ನೀವು ನಿಮ್ಮ ಪತ್ನಿಯ ಮಾತನ್ನು ಚಾಚು ತಪ್ಪದೆ ಪಾಲಿಸಿ ಅಂತ ನಗುತ್ತಾ ನುಡಿದಾಗ ನನಗೋ ಆಶ್ಚಯ೯ ಇವಳ ಮೇಲೆ ಕೋಪ ........ನನ್ನ ಗುಣಗಾನ ಮಾಡಿದ್ದಳಲ್ಲ ಅದಕ್ಕೆ. ವೈದ್ಯರು ನಿಮ್ಮ ಪತ್ನಿಯ ಆಸೆಯಂತೆ ಅವರೊಟ್ಟಿಗೆ, ಮಕ್ಕಳೊಟ್ಟಿಗೆ, ಎಲ್ಲರೊಂದಿಗು ಮಾತಾಡ್ತಾ ಇರಿ, ಸಣ್ಣ ಸಣ್ಣ ವಿಷಯದಲ್ಲು ಅವರಂತೆ ಸಂತೋಷ ಪಡಿ, ದಿನ ನಿತ್ಯ ಜೀವನದಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಮಾಡಿಕೊಳ್ಳಿ ಅಂತ ಹೇಳಿ ಮಾತ್ರೆ ಬರೆದುಕೊಟ್ಟು ಎರಡು ತಿಂಗಳು ಬಿಟ್ಟು ಬರಲು ಹೇಳಿದರು.

ತಿಂಡಿ ಊಟದಲ್ಲಿ ನನ್ನದೇ ಶಿಸ್ತನ್ನ ಉಳಿಸಿಕೊಂಡು, ನನ್ನ ದಿನ ನಿತ್ಯದ ಬದುಕಿನಲ್ಲಿ ಒಂದೊಂದೇ ಬದಲಾವಣೆ ಮಾಡಿಕೊಳ್ಳುತ್ತಾ ಬಂದೆ. ಇವಳಂತೆ ಮನೆ ಮುಂದೆ ಬರುವ ಹಸುವಿಗೆ ತಿನ್ನಲು ಹಣ್ಣು ಕೊಡುತ್ತಾ ಅದರ ಮೈ ಸವರಿದೆ. ನಾಲ್ಕಾರು ದಿನದಲ್ಲಿ ಆ ಹಸು ನನ್ನ ಗೆಳೆತಿಯಾಗಿ ಬಿಟ್ಟಳು. ಬಾಗಿಲು ಗುಡಿಸುವುದು, ಗಿಡಗಳಿಗೆ ನೀರು ಹಾಕುವುದು ಇತ್ಯಾದಿ. ಇವಳೊಂದಿಗೆ ತರಕಾರಿ ತರಲು ಹೋಗಲು ಶುರುಮಾಡಿದೆ. ನಮ್ಮ ಬೀದಿಯ ಮಕ್ಕಳು ಮನೆಯ ಹತ್ತಿರದ ಬಯಲಲ್ಲಿ ಕ್ರಿಕೆಟ್ ಆಡುವಾಗ ಅವರೊಂದಿಗೆ ಸೇರಿಕೊಂಡು ಆಡಲು ಶುರುಮಾಡಿದೆ. ಮೊದಮೊದಲು ಇವರು ದೊಡ್ಡವರು ಬೇಡಪ್ಪಾ ಅಂತ ಹೇಳ್ತಾ ಇದ್ದವರು, ಈಗ ಅಂಕಲ್ ಬೇಗ ಬನ್ನಿ ಅಂತ ಕರೆಯುವಷ್ಟು ಗೆಳೆತನ ಬಂದುಬಿಟ್ಟಿತು. ಇವಳ ಇಷ್ಟದ ಸುಡುಕೊ ಬಿಡಿಸುವಾಗ ನಾನು ಜೊತೆ ಸೇರಿದೆ. ಮಲ್ಲಿಗೆ ಮೊಗ್ಗು ಬಿಡಿಸುವಾಗ ಜೊತೆಯಾದೆ. ಮಕ್ಕಳು ಬಂದಾಗ ಅವರೊಂದಿಗೆ ಕುಳಿತು ಸಿನೆಮಾ ನೋಡಲು ಶುರುಮಾಡಿದೆ. ಅವರೊಂದಿಗೆ ಪ್ರವಾಸ ಹೋಗಿ ಬಂದೆ. ಈಗೀಗ ನನ್ನ ಮನಸ್ಸು ಕೂಡ ಬಹಳ ಪ್ರಫುಲ್ಲವಾಗಿರುತ್ತದೆ. ಏನೋ ಖುಷಿ, ಏನೋ ನೆಮ್ಮದಿ. ನನ್ನ ಈ ಬದಲಾವಣೆ ನೋಡಿ ಕಲಾ ಹಾಗು ಮಕ್ಕಳು ಬಹಳ ಸಂತೋಷಪಟ್ಟರು.

ಎರಡು ತಿಂಗಳ ನಂತರ ವೈದ್ಯರನ್ನು ಭೇಟಿಯಾಗಲು ಹೋದಾಗ "ಹಲೋ ಹ್ಯಾಪಿ ಯಂಗ್ ಮ್ಯಾನ್" ಎನ್ನುವ ಮಾತುಗಳೊಂದಿಗೆ ನನ್ನನ್ನು ಬರಮಾಡಿಕೊಂಡಾಗಲೇ ನನ್ನಲ್ಲಾದ ಬದಲಾವಣೆಯನ್ನ ಎಷ್ಟು ಬೇಗ ಕಂಡುಹಿಡಿದರು ಅಂತ ಆಶ್ಚರ್ಯ ಆಯಿತು. ನನ್ನನ್ನ ಪರೀಕ್ಷಿಸಿದ ನಂತರ, ಏನು ತೊಂದರೆ ಇಲ್ಲ , ಮಾತ್ರೆಗಳನ್ನು ಮುಂದುವರೆಸಲು ಹೇಳಿ, ಹೀಗೆ ಯಾವಾಗಲು ನಗುತ್ತಾ ಇರಿ ಅಂತ ಬೆನ್ನು ತಟ್ಟಿ ಹೇಳಿದಾಗ ಕಲಾಳ ಕಣ್ಣಲ್ಲಿ ಸಂತೋಷದಿಂದ ಕಣ್ಣೀರು ಬಂತು.

ooo



# ಆತ್ಮಸ್ಥೈರ್ಯದ ಬದುಕು ನಮ್ಮದಾಗಲಿ



ಅಂಬಿಕಾ ಸಂತೋಷ್

ಜೀವನ ಎನ್ನುವುದು ಒಂದು ಲವಲವಿಕೆಯ ತಾಣವಾಗಿದೆ. ಅದು ಸದಾ ಜಾಗೃತವಾಗಿರಬೇಕು. ಕ್ರಿಯಾಶೀಲತೆ ಚಿಮ್ಮುತ್ತಿರಬೇಕು. ಪ್ರತಿಯೊಂದು ಹಂತದಲ್ಲಿಯೂ ನಾನಾ ತೆರನಾದ ಸಮಸ್ಯೆಗಳು ಕಾಣಿಸಿಕೊಂಡಾಗ ಆತ್ಮಸ್ಥೈರ್ಯ ಕಳೆದುಕೊಳ್ಳುವ ಅನಿವಾರ್ಯತೆ ಉಂಟಾಗುತ್ತದೆ. ಇದರಿಂದ ಹೊರಬರಲು ಮಾಡುವ ಪ್ರಯತ್ನದಲ್ಲಿ ಆಶಾಭಾವನೆ ಕಾಣದಿದ್ದಾಗ ಬದಲು ಯೋಚನೆಗೆ ಸಿಲುಕಿ ಆತ್ಮಹತ್ಯೆಗೆ ಶರಣು ಹೋಗಬೇಕಾಗುತ್ತದೆ.

ಆತ್ಮವಿಶ್ವಾಸದಿಂದ ಜೀವನವನ್ನು ಎದುರಿಸಬೇಕಾದ ಎದೆಗಾರಿಕೆ, ಆತ್ಮಸ್ಥೈರ್ಯ, ಸತತ ಪ್ರಯತ್ನ, ಜಾಣ್ಮೆ ಮುಂತಾದವುಗಳ ಬಗ್ಗೆ ಯೋಚಿಸಿ ಧೈರ್ಯದಿಂದ ಬದುಕನು ರೂಪಿಸಿಕೊಳ್ಳುವ ಹೆಜ್ಜೆ ಹಾಕಬೇಕಾಗುತ್ತದೆ. ಸಣ್ಣ ಪುಟ್ಟ ಘಟನೆಗಳಿಗೆ ಆತ್ಮಹತ್ಯೆಗೆ ಶರಣಾಗುವಂತಹ ಕಠೋರ ನಿರ್ಧಾರವನ್ನು ತೆಗೆದುಕೊಳ್ಳುವುದು ಸಮಂಜಸವಲ್ಲ. ಪ್ರತಿಯೊಂದು ಸಮಸ್ಯೆಗೆ ಪರಿಹಾರನೆಂಬುದು ಇದ್ದೇ ಇರುತ್ತದೆ. ಸಾವೆಂದಿಗೂ ಉತ್ತರವಾಗಲಾರದು. ಕಾರಣದ ಮೂಲ ಹುಡುಕುತ್ತಾ ಹೋದರೆ ಬಹಳಷ್ಟು ಘಟನೆಗಳಲ್ಲಿ ಸಂಕುಚಿತ ಮನೋಭಾವ, ಅಪಮಾನ, ಸಹಿಸಲಾರದ ಮನೋವೃತ್ತಿ, ಪರಿಸ್ಥಿತಿಯನ್ನು ಧೈರ್ಯದಿಂದ ನಿಭಾಯಿಸಲಾಗದ ಹೇಡಿತನ ಮುಂತಾದವುಗಳು ಹೆಚ್ಚಾಗಿ ಗೋಚರವಾಗುತ್ತದೆ

ಕೆಲವೊಮ್ಮೆ ಒಂಟಿತನಗಳು ಆತ್ಮಹತ್ಯೆಯಂತಹ ಪ್ರಮಾಧಕ್ಕೆ ಮೂಖ ಸಾಕ್ಷಿ ಯಾಗುತ್ತದೆ. ಮನದಾಳದ ಅಭಿಲಾಷೆ, ನೋವು, ಸಂಕಟ, ದುಃಖ, ದುಮ್ಮಾನ ಹಂಚಿಕೊಳ್ಳಲಾಗದ ಪರಿಸ್ಥಿತಿ, ತಂದೆ ತಾಯಿಯರ ಬೇಜವಾಬ್ದಾರಿ, ಪೋಷಕರ ನಿರ್ಲಕ್ಷತೆ ಮೊದಲಾದ ಮಾನಸಿಕ ದೌರ್ಬಲ್ಯಗಳು ಆತ್ಮಹತ್ಯೆಯನ್ನು ಪ್ರಚೋದಿಸುತ್ತವೆ .

ಹಾಗಾಗಿ ಧನಾತ್ಮಕ ದೃಷ್ಟಿಯಲ್ಲಿ ಚಿಂತನ ಮಂಥನಗಳು ನಡೆಯಲೇಬೇಕು. ಏಕೆಂದರೆ ಬದುಕು ಅಮೂಲ್ಯವಾದದ್ದು ಇಲ್ಲ ಸಲ್ಲದ ಕಾರಣಗಳಿಂದಾಗಿ, ಹೇಡಿತನದಿಂದಾಗಿ ಬದುಕಿನಿಂದ ಎಂದಿಗೂ ಹಿಮ್ಮೆಟ್ಟಬಾರದು. ಎಂಥಹುದೇ ಸಮಸ್ಯೆಗಳು ಎದುರಾದರೂ ಎದುರಿಸಿ ನಿಲ್ಲುವ ಆತ್ಮಸ್ಥೈರ್ಯವನ್ನು ಬೆಳೆಸಿಕೊಳ್ಳಬೇಕು. ಈ ರೀತಿಯ ಅಭದ್ರತೆಯ ಭಾವನೆಯಿಂದ ಹೊರಬಂದು ಆತ್ಮಸ್ಥೈರ್ಯ ತುಂಬಿಕೊಂಡು ಬದುಕನ್ನು . ನಮ್ಮ ಬದುಕನ್ನು ಬದುಕಿಸಬೇಕು. ಬದುಕನ್ನು ಬದುಕಲು ಬಿಟ್ಟು ಬಿಡಬೇಕು. ೦೦೦

# ಬಿಸಿಲ ಕಥೆ



ಮಾರ್ಗರೇಟ್ ಗಾಮಾ

ಇಂದಿನ ಬಿಸಿಲ ಕಥೆ ಏನೆಂದು ಹೇಳಲಿ
ಸೂರ್ಯನ ಸಿಟ್ಟು ಯಾಕೋ ನೆತ್ತಿಗೆರೈತಿ
ನಮ್ಮ ನೆತ್ತಿಯಾಗಿಂದ ನೀರ ಬಸಿಯಾ ತೇತಿ
ಯವ್ವ ಏನಂತ ಹೇಳಲಿ ಇಂದಿನ ಬಿಸಿಲಕಥಿ

ಬಣ ಬಣ ಅನ್ನತೈತಿ ಓಣಿ
ಬಾಡತೈತಿ ನಮ್ಮ ಊರ ಅಗಸೆಯಾಗಿನ ಕೇರಿ
ಶಿವ ಶಿವ ಅನ್ನೊಂತ ಶಿವರಾತ್ರಿ ಬಂತು
ಏನಾರು ಕುಡಿಬೇಕು ಅನಿಸ್ತಿತಿ ತಂಪು ತಂಪು
ಯವ್ವ ಏನಂತ ಹೇಳಲಿ ಇಂದಿನ ಬಿಸಿಲಕಥಿ

ಸಂತ್ಯಾಗೆಲ್ಲಾ ಮೆಣಸಿನ ಕಾಯಿ ಘಾಟು
ಎಲ್ ನೋಡ್ತಿ ಅಲ್ಲಿ ತರಹತರಹದ ಮೆಣಸಿನಕಾಯಿ ಗಂಟು
ಬೇರೆ ಸೆಂಡಿಗೆ ಯಾಕೆ ಬೇಕು? ನಾವ ಸಂಡಿಗೆ ಆಗಾತೀವಿ
ಯವ್ವ ಏನಂತ ಹೇಳಲಿ ಈಗಿನ ಬಿಸಿಲಕಥಿ

ಮೈ ಸುಟ್ಟ ಕರಕಲಾಗೈತಿ ಬಿಸಿಲಿಗೆ ಮಾರಿ, ಕೈ ಬಣ್ಣ ಬೇರೆ ಆಗೈತಿ
ಮೈಗ ಏನ ಮೆತ್ತಬೇಕು ಗೊತ್ತಾಗವಲ್ದ
ಯವ್ವ ಏನಂತ ಹೇಳಲಿ ಈಗಿನ ಬಿಸಿಲಕಥಿ!!

ooo

# ಮೌನ ಶಿಕ್ಷೆ



ರತ್ನಾ ಪಟವರ್ಧನ್

ಶ್ರೀನಾಥ, ಹೆಂಡತಿಯ ಸ್ನೇಹಿತೆ ಗಾಯತ್ರಿಯ ಮಗಳ ಮನೆಯ ಮದುವೆಗೆ ಬಂದ. ಪರಿಚಿತರು ಯಾರೂ ಅವನಿಗೆ ಮಾತಿಗೆ ಸಿಗಲಿಲ್ಲ. ಮುಹೂರ್ತಕ್ಕೆ ಇನ್ನೂ ಹೊತ್ತಿದೆ. ಇಷ್ಟು ಬೇಗ ಬಂದ ತಪ್ಪಿಗೆ ಸುಮ್ಮನೆ ಕುಳಿತು ಮದುವೆ ಮಂಟಪ ನೋಡುತ್ತ ಕಾಲ ಕಳೆದ.

ರೇಷ್ಮೆ ಸೀರೆ ಉಟ್ಟ ಹೆಂಗಸರು ತಮ್ಮ ಒಡವೆಗಳನ್ನು ಪ್ರದರ್ಶಿಸುವಂತೆ ತೊಟ್ಟು ಓಡಾಡುತ್ತಿದ್ದಾರೆ. ಅವರಲ್ಲಿ ಶರಧಿಯನ್ನು ಹುಡುಕಿದ. ಅವಳು ಸ್ನೇಹಿತೆಯರ ಗುಂಪಿನಲ್ಲಿ ಒಂದಾಗಿದ್ದಾಳೆ.

ಇವನ ಪೇಚಾಟ ನೋಡಿ ಪಕ್ಕದಲ್ಲಿ ಕುಳಿತಿದ್ದ ಹುಡುಗ, "ಸಾರ್ ಕಾಫಿ ಕೌಂಟರ್ ಅಲ್ಲಿದೆ. ಬೇಕಾದರೆ ಹೋಗಿ ಕುಡಿದು ಬನ್ನಿ. ಮುಹೂರ್ತಕ್ಕೆ ಇನ್ನೂ ಹೊತ್ತಾಗುತ್ತದೆ" ಎಂದ. ಕೌಂಟರ್ ಸುತ್ತಲೂ ಜನರು ಲಗ್ಗೆ ಇಟ್ಟಿದ್ದರು.

ಅಲ್ಲಿ ಸಕ್ಕರೆ ಹಾಕಿದ ಕಾಫಿ, ಶುಗರ್ ಲೆಸ್ ಕಾಫಿ, ಟೀ ಎಂದು ಮೂರು ಪ್ರಕಾರದ ಪಾನೀಯಗಳನ್ನು ಇಟ್ಟ ಟೇಬಲ್ ಮುಂದೆ ಜನರು ದಾಳಿ ನಡೆಸಿದ್ದಾರೆ. ಅವರ ಹಿಂದೆ ವಯಸ್ಸಾದ ವ್ಯಕ್ತಿ ಒಬ್ಬರು ನಿಂತಿದ್ದಾರೆ. ಅವರನ್ನು ಎಲ್ಲೋ ನೋಡಿದ ನೆನಪು. ಊರಿನವರು, ಸ್ನೇಹಿತರ ಮನೆಯವರು, ಸಂಬಂಧಿಕರು ಎಲ್ಲರೂ ಅವನ ಸ್ಮೃತಿ ಪಟಲದಲ್ಲಿ ಹಾದು ಹೋದರು. ಅಷ್ಟರಲ್ಲಿ ಅವನು ಕೂಡ ಕಾಫಿ ಕೊಡುತ್ತಿದ್ದ ಸ್ಥಳವನ್ನು ತಲುಪಿದ್ದ.

ಅವನು ಕಾಫಿಗೆ ಸಾಲಿನಲ್ಲಿ ನಿಲ್ಲುವ ಬದಲು ಆ ವೃದ್ಧರ ಬಳಿಗೆ ಹೋಗಿ, "ನೀವು ಇಲ್ಲೇ ಕುಳಿತುಕೊಳ್ಳಿ. ನಾನು ಕಾಫಿ ತಂದು ಕೊಡುತ್ತೇನೆ" ಎಂದು ಹತ್ತಿರದಲ್ಲೇ ಇದ್ದ ಕುರ್ಚಿ ತೋರಿಸಿದ.

ಅವರು ಕುಳಿತುಕೊಳ್ಳುತ್ತ, "ನನಗೆ ಶುಗರ್ ಲೆಸ್ ಕಾಫಿ ಬೇಕಪ್ಪ" ಎಂದರು.

ಶ್ರೀನಾಥ ಅವರಿಗೆ ಒಂದು ಶುಗರ್ ಲೆಸ್ ಕಾಫಿ ತುಂಬಿದ್ದ ಪೇಪರ್ ಕಪ್ ತಂದು ಕೊಟ್ಟ.

ಅದನ್ನು ಅವರು ಕೈಗೆ ತೆಗೆದುಕೊಂಡು, "ಸಾಲಿನಲ್ಲಿ ನಿಂತರೂ ಬಿಸಿ ಕಾಫಿಯನ್ನು ಹೇಗೆ ಹಿಡಿದು ತರುವುದು ಅಂತ ಯೋಚಿಸುತ್ತಿದ್ದೆ. ಅಷ್ಟರಲ್ಲಿ ನೀವು ಬಂದಿರಿ. ತುಂಬಾ ಥ್ಯಾಂಕ್ಸ್" ಎಂದರು.

ಶ್ರೀನಾಥ, "ಪರವಾಗಿಲ್ಲ. ನೀವು ನಿಶ್ಚಿಂತೆಯಿಂದ ಕುಳಿತು ಕುಡಿಯಿರಿ" ಎಂದ.

ಅವನು ಮತ್ತೆ ಕೌಂಟರ್ ಹತ್ತಿರ ಹೋಗಿ ಸಕ್ಕರೆ ಹಾಕಿದ್ದ ಒಂದು ಕಾಫಿಯ ಕಪ್ ತರುವ ಹೊತ್ತಿಗೆ ಆ ವೃದ್ಧರು ಅಲ್ಲಿಂದ ಎದ್ದು ಹೋಗಿದ್ದರು. ಸುತ್ತಲೂ ಅವರಿಗಾಗಿ ಹುಡುಕಿದ. ಅಷ್ಟರಲ್ಲಿ ಮುಹೂರ್ತದ ಸಮಯ ಆಗಿತ್ತು. ಮತ್ತೆ ಮದುವೆ ಮನೆ ಕಳೆ ಕಟ್ಟಿತು. ನಾಗಸ್ವರದವರು ಹುರುಪಿನಿಂದ ವಾದ್ಯ ನುಡಿಸುತ್ತಿದ್ದರು. ಪುರೋಹಿತರು ಮುಹೂರ್ತದ ವೇಳೆ ಜೋರಾಗಿ ಗಟ್ಟಿ ಮೇಳ ಎಂದು ಕೂಗಿದರು. ನಾಗಸ್ವರದವರು ಇನ್ನೂ ಜೋರಾಗಿ ವಾದ್ಯದ ವೇಗ ಮತ್ತು ಶಬ್ದ ಹೆಚ್ಚಿಸಿದರು. ಇಡೀ ಮದುವೆ ಮನೆ ಇಂದ್ರಸಭೆಯಂತೆ ವಿಜೃಂಭಿಸಿತು. ವಧು ವರರು ಅಕ್ಕ ಪಕ್ಕದಲ್ಲಿ ಕುಳಿತರು.

ಮುಂದಿನ ಕೆಲಸ ಪುರೋಹಿತರು ಮತ್ತು ಹೊಸದಾಗಿ ಮದುವೆಯಾದ ವಧು ವರರದ್ದು.

ಶರಧಿ ಸ್ನೇಹಿತೆಯರೊಂದಿಗೆ ಮಾತನಾಡಿ ಸುಸ್ತಾಗಿ ಗಂಡನನ್ನು ಹುಡುಕಿಕೊಂಡು ಬಂದಳು. "ಇನ್ನೂ ಇಲ್ಲೇ ಕುಳಿತಿದ್ದೀರಾ? ಆ ಕಡೆ ಕಾಫಿ ಕೊಡುತ್ತಿದ್ದರು. ಹೋಗಿ ಕುಡಿಯಬೇಕಿತ್ತು" ಎಂದಳು.

"ಆಗಲೇ ಹೋಗಿ ಕುಡಿದೆ. ಅಲ್ಲಿ ಒಬ್ಬರು ವಯಸ್ಸಾದವರನ್ನು ನೋಡಿದೆ. ನನ್ನ ಮನಸ್ಸು ಹೇಳುತ್ತಿದೆ... ಅವರು ನನಗೆ ತುಂಬಾ ಪರಿಚಿತರು. ಆದರೆ ಈಗ ನೆನಪಾಗುತ್ತಿಲ್ಲ" ಎಂದ.

ಅವಳೂ ಸುತ್ತಲೂ ನೋಡಿದಳು. ಅದು ವ್ಯರ್ಥ ಪ್ರಯತ್ನವಾಗಿತ್ತು. ಗಂಡನಿಗೆ ತಿಳಿದಿರುವ ವ್ಯಕ್ತಿ ಅವಳಿಗೂ ತಿಳಿಯಬೇಕೆಂದೇನು ಇಲ್ಲ.

"ಮೊದಲ ಪಂಕ್ತಿ ಊಟಕ್ಕೆ ತಯಾರಾಗಿದೆ. ನೋಡಿ... ಅವರೆಲ್ಲ ಹೋಗುತ್ತಾ ಇದ್ದಾರೆ. ಬೇಕಾದರೆ ನೀವೂ ಹೋಗಿ. ನಾನು ಮುಂದಿನ ಪಂಕ್ತಿಯಲ್ಲಿ ಊಟ ಮಾಡುತ್ತೇನೆ" ಎಂದಳು.

ಅವನಿಗೂ ಕುಳಿತು ಬೇಸರವಾಗಿತ್ತು. ಎದ್ದು ಊಟಕ್ಕೆ ಹೊರಟ. ಒಂದು ಎಲೆ ಹಿಡಿದು ಕುಳಿತ. ಪಂಕ್ತಿಯ ಜನ ಕುಳಿತ ಮೇಲೆ ಅಡುಗೆಯವರು ಉಳಿದವರನ್ನು ಹೊರಗೆ ಕಳುಹಿಸುತ್ತಾ ಇದ್ದರು. ಅವರಲ್ಲಿ ಸ್ವಲ್ಪ ಮೊದಲು ನೋಡಿದ್ದ ವೃದ್ಧರೂ ಇದ್ದರು. ಅವನು ವೃದ್ಧರ ಬಳಿ ಹೋಗಿ, "ಬನ್ನಿ... ನಿಮಗೆ ಒಂದು ಎಲೆ ಕಾಯ್ದಿರಿಸಿದ್ದೇನೆ" ಎಂದ. ಆತ ಮೊದಲು ಅನುಮಾನಿಸಿದರೂ ಎಲೆಯ ಕಡೆಗೆ ನಡೆದರು.

ಶ್ರೀನಾಥ ಅವರ ಕೈ ಹಿಡಿದು ನಡೆಯತೊಡಗಿದ. ಅವರ ಬಲ ಕೈಯ್ಯಲ್ಲಿ ನಾಲ್ಕು ಬೆರಳುಗಳು! ಕಿರು ಬೆರಳ ಜಾಗ ಖಾಲಿಯಾಗಿದೆ. ಈಗ ಅವನಿಗೆ ತಾನು ಕೈ ಹಿಡಿದಿರುವುದು ಶ್ರೀನಿವಾಸ ಮೇಷ್ಟ್ರ ಕೈ ಎಂದು ತಿಳಿಯಿತು. ಅವರ ಕಿರು ಬೆರಳಿನ ಗೈರಿಗೆ ತಾನು ಕಾರಣ. ಮೈಯ್ಯೆಲ್ಲ ಜಿಲ್ಲನೆ ಬೆವತಿತು. ಅವರ ಮುಖ ನೋಡಿದ. ಆದರೆ ಆ ಮುಖದಲ್ಲಿ ಯಾವ ರಾಗ ದ್ವೇಷವೂ ಕಾಣಲಿಲ್ಲ.

ಶ್ರೀನಿವಾಸ ಮೇಷ್ಟ್ರ ಕಿರು ಬೆರಳು ಘಾಸಿಯಾಗಿದ್ದಕ್ಕೆ ಕಾರಣ ತಾನು. ಏಳನೆಯ ತರಗತಿಯಲ್ಲಿ ಓದುತ್ತಿದ್ದಾಗ ಅದೊಂದು ದಿನ ತಾನು ಸೈಕಲ್ಗಳನ್ನು ನಿಲ್ಲಿಸಿದ್ದ ಕಡೆಗೆ ಹೋದೆ. ಆಗತಾನೆ ಸೈಕಲ್ ಕಲಿತಿದ್ದರೂ ಅದನ್ನು ಕೊಳ್ಳುವ ಶಕ್ತಿ ಅಪ್ಪನಲ್ಲಿರಲಿಲ್ಲ. ಈ ದಿನ ಸೈಕಲ್ ಒಂದನ್ನು ಕದ್ದು ಓಡಿಸುವ ಮನಸ್ಸು ಬಂದಿತು. ಅಷ್ಟರಲ್ಲಿ ಶ್ರೀನಿವಾಸ ಮೇಷ್ಟ್ರು ಆಗತಾನೆ ಸೈಕಲ್ ತಂದು ನಿಲ್ಲಿಸಿದರು. ಅವರು ಸೈಕಲ್ಲಿಗೆ ಬೀಗ ಹಾಕುವ ಮೊದಲು, ಅದರ ಹ್ಯಾಂಡಲ್ ಗೆ ಸಿಕ್ಕಿಸಿದ್ದ

ಚೀಲ ತೆಗೆಯಲು ಮುಂದಾದರು. ಅದೇನು ಆವೇಶ ಬಂದಿತ್ತೊ. ಅವರು ತಲೆ ಎತ್ತುವ ವೇಳೆಗೆ ಅದರ ಹ್ಯಾಂಡಲ್ ಹಿಡಿದು, ಸೈಕಲ್ ಹತ್ತಿ ಪೆಡಲ್ ತುಳಿಡಿದ್ದೆ.

ಪೆಡಲ್ ಒಂದು ಸುತ್ತು ಸುತ್ತಿದ್ದೆನೇನೊ. ಅಷ್ಟರಲ್ಲಿ "ಅಯ್ಯೋ" ಎನ್ನುವ ನೋವಿನ ಚೀತ್ಕಾರ ಹಿಂದಿನಿಂದ ಕೇಳಿಸಿತು.

ಸೈಕಲ್ ನಿಲ್ಲಿಸಿ ಹಿಂದೆ ತಿರುಗಿ ನೋಡಿದೆ. ಶ್ರೀನಿವಾಸ ಮೇಷ್ಟ್ರ ಬಲಗೈ ರಕ್ತಸಿಕ್ತವಾಗಿದೆ. ಅವರು ಸೈಕಲ್ ಮುಂದೆ ಹೋಗದಂತೆ ಚಕ್ರಕ್ಕೆ ಕೈ ಹಾಕಿದ್ದರು. ಕೈ ಸೈಕಲ್ ಚಕ್ರದ ಸ್ಪೋಕ್ಸ್ ಬೆರಳ ಮಧ್ಯೆ ಸಿಲುಕಿತ್ತು. ಅಪರಾಧಿ ತಾನಾಗಿದ್ದೆ. ಬಲಿಪಶು ಮೇಷ್ಟ್ರು. ಸುತ್ತಲೂ ಸಾಕ್ಷಿಗೆ ಯಾರೂ ಇರಲಿಲ್ಲ.

ಅವರು, "ಬೇಗ ಹೋಗಿ ಬಸವರಾಜನ್ನ ಕರಿ" ಎಂದರು.

ಬಸವರಾಜು ಶಾಲೆಯ ಜವಾನ. ಅವನು ವೈದ್ಯರ ಬಳಿ ಮೇಷ್ಟ್ರನ್ನ ಕರೆದುಕೊಂಡು ಹೋದ. ಮೇಷ್ಟ್ರಿಗೆ ಚಿಕಿತ್ಸೆ ಆಯಿತು. ಅವರ ಬಲ ಕೈ ಶಾಶ್ವತವಾಗಿ ನಾಲ್ಕು ಬೆರಳುಗಳನ್ನು ಹೊಂದಿತು. ಆದರೆ ಎಲ್ಲೂ ಅಪರಾಧಿಯಾಗಿ ತನ್ನ ಹೆಸರು ಹೊರಗೆ ಬರಲಿಲ್ಲ.

ಮುಂದೆ ಓದಿ ಪದವಿ ಪಡೆದೆ. ಒಂದು ಕಂಪನಿಯ ಅಕೌಂಟೆಂಟ್ ಆದೆ. ಮನೆ ಇದೆ. ಎರಡು ಮಕ್ಕಳನ್ನು ಹೊಂದಿದ ಸುಂದರ ಸಂಸಾರ ಇದೆ. ಕಾರಿನ ಒಡೆಯ ಕೂಡ.

ವಾಸ್ತವಕ್ಕೆ ಬಂದ. ಹಿಂದಿನದೆಲ್ಲಾ ನೆನಪಾಗಿ ಅವನ ಕಣ್ಣೀರು ಹರಿಯಿತು. ಅಷ್ಟರಲ್ಲಿ ಮೊದಲ ಪಂಕ್ತಿಗೆ ಊಟಕ್ಕೆ ಕುಳಿತವರು ಕೈ ತೊಳೆದು ಹೊರಗೆ ಬರುತ್ತಿದ್ದರು.

ಅವನೂ ಎದ್ದು ಅವರಲ್ಲಿ ಶ್ರೀನಿವಾಸ ಮೇಷ್ಟ್ರನ್ನು ಗುರುತಿಸಿದ. ಒಂದು ಕುರ್ಚಿಯ ಮೇಲೆ ಅವರನ್ನು ಕೂರಿಸಿದ. "ಮೇಷ್ಟ್ರೆ... ನಾನು ಶ್ರೀನಾಥ. ಏಳನೆಯ ತರಗತಿಯಲ್ಲಿದ್ದಾಗ ನೀವು ನಿಮ್ಮ ಕಿರು ಬೆರಳು ಕಳೆದುಕೊಳ್ಳಲು ಕಾರಣ ನಾನೆ" ಎಂದ.

"ಕಿರು ಬೆರಳು ತಾನೆ. ಆಗುತ್ತೆ ಅಂತಹ ತಪ್ಪುಗಳು. ನಿನ್ನನ್ನು ಕಾಫಿ ಕುಡಿಯುವಾಗಲೇ ಗುರುತು ಹಿಡಿದಿದ್ದೆ" ಎಂದರು.

"ನಾನು ಏನೂ ತಿಳಿಯದ ಹಳ್ಳಿಯ ವಿದ್ಯಾರ್ಥಿ ಆಗಿದ್ದೆ ಮೇಷ್ಟ್ರೆ. ಇವತ್ತು ಎರಡು ಮಕ್ಕಳ ತಂದೆಯಾಗಿ ಕೇಳುತ್ತಿದ್ದೇನೆ. ನನ್ನನ್ನು ಕ್ಷಮಿಸಿ ಮೇಷ್ಟ್ರೆ" ಎಂದ. ಅದು ಮದುವೆ ಮನೆ ಎನ್ನುವುದನ್ನು ಮರೆತು ಅವರ ಕಾಲಿಗೆ ನಮಸ್ಕರಿಸಿದ.

ಅವರು ಅವನ ತಲೆಯನ್ನು ಮುಟ್ಟಿ, "ಮಕ್ಕಳನ್ನು ಚೆನ್ನಾಗಿ ನೋಡಿಕೊ" ಎಂದು ಅಲ್ಲಿಂದ ಎದ್ದು ಹೋದರು.

ಹನಿ ಕಣ್ಣಾಗಿ ಆ ದಿಕ್ಕಿನ ಕಡೆಗೇ ನೋಡುತ್ತಿದ್ದ ಶ್ರೀನಾಥ. ಅವನ ಹಿಂದೆ ನಿಂತಿದ್ದಳು ಶರಧಿ. ಅವಳು ಕೂಡ ಗಂಡನ ಪರಿಸ್ಥಿಯಲ್ಲೇ ಇದ್ದಳು.

ooo

# ಯಾರ್ ಏನ್ ಅನ್ಕೊಳ್ತಾರೋ..



ರೇಷ್ಮಾ ಶೆಟ್ಟಿ

ಮನಸ್ಸು ಹಾಗೇಯೇ ಯಾವಾಗಲೂ ಏನಾದರೂ ಯೋಚನೆ ಮಾಡತ್ತಲೇ ಇರುತ್ತೆ. ಆದರೆ ನಾವುಗಳು ಪಾಸಿಟೀವ್ ಯೋಚನೆಗಳಿಗೆ ಬಲ ಕೊಡೋದು ಬಿಟ್ಟು ನಾವು ಯಾವಾಗಲೂ ಯಾರ ನನ್ನ ಬಗ್ಗೆ ಏನ್ ಅನಕೊಳ್ಳತ್ತಾರೋ ಅಂತಾ ಯೋಚನೇ ಮಾಡತ್ತೀವಿ ಅಲ್ವಾ?, ಯಾರ ಜೊತೆಗೂ ಜಗಳ ಆಡತ್ತೀವೀ ಕೋಪ ಮಾಡಕೊಂಡು ಬೈದ ಇರತ್ತೀವೀ ಆಮೇಲೆ ಎಷ್ಟು ಸಮಯ ಆದರೂ ಅವರ ಏನ್ ಅನ್ನಕೊಂಡರು ಅಂತಾ ಯೋಚಿಸತ್ತಾನೇ ಇರತ್ತೀವೀ. ಆ ಬಟ್ಟೆ ಹಾಕೊಂಡರೇ ಏನ್ ಹೇಳತ್ತಾರೋ ಇತರ ಇದ್ದರೆ ಏನ್ ಕಮೆಂಟ್ ಮಾಡತ್ತಾರೋ ಹೀಗೆ ಇಂತದೇ ಋಣಾತ್ಮಕ ಯೋಚನೆಗಳಲ್ಲೆ ಬದುಕನ್ನ ಸಾಗಿಸುತ್ತೇವೆ.

ಎಲ್ಲಾರೂ ಇವಾಗ ಬ್ಯುಸಿ ಲೈಫ್ ಲೀಡ್ ಮಾಡತ್ತಾ ಇರೋದು ಅವರ ಬಗ್ಗೆ ಅವರಿಗೆ ಯೋಚನೆ ಮಾಡಲಿಕ್ಕೆ ಸಮಯವಿಲ್ಲ ಅಂತಹದ್ದರಲ್ಲಿ ಯಾರಾದರೂ ಇನ್ನೊಬ್ಬರ ಬಗ್ಗೆ ಯೋಚಿಸುತ್ತಾರೆ ಅಂದರೆ ಅವರು 200 ವರ್ಷ ಬದುಕುತ್ತಾರೆ ಅಂತಾನೇ ಅರ್ಥ ತುಂಬಾ ಆಯಸ್ಸು ಇರುವವರು ಮಾತ್ರ ಹಾಗೆ ಮಾಡಬಹುದು ಅಷ್ಟೇ  ನಾವು ಎಲ್ಲಾರಿಗೂ ಇಷ್ಟ ಆಗುವಂತೇ ಇರಲಿಕ್ಕೆ ಬದುಕಲಿಕ್ಕೆ ಸಾಧ್ಯವಿಲ್ಲ ಬೇರೆಯವರನ್ನ ಮೆಚ್ಚಿಸುವ ಕೆಲಸನೂ ನಾವು ಮಾಡಬಾರದು. ನಮ್ಮ ಬಗ್ಗೆ ಯಾರೂ ಏನೇ ಹೇಳಲಿ ಏನೇ ಯೋಚನೆ ಮಾಡಲಿ ಅದು ನಮಗೆ ಅನಗತ್ಯ. ನಾವು ಹೇಗೆ ಇರಬೇಕು ಏನು ಸಾಧನೆ ಮಾಡಬೇಕು ನಾವು ಏನನ್ನ ಕಲಿಯಬೇಕು ಅದರ ಕಡೆಗೆ ಮಾತ್ರ ನಮ್ಮ ಗಮನವಿರಬೇಕು

ಯಾವತ್ತಾದರೂ ಒಂದು ದಿನ ನಾವು ನಮ್ಮ ಬಗ್ಗೆ ಏನ್ ಯೋಚಸತ್ತೇವೇ ಅನ್ನೋದರ ಬಗ್ಗೆ ಚಿಂತಿಸಿದ್ದು ಇದೀಯಾ ಖಂಡಿತ ಇಲ್ಲ. ನಮ್ಮನ್ನ ನಾವು ಅರ್ಥ ಮಾಡಿಕೊಳ್ಳಬೇಕು ಸ್ವಾಮಿ ವಿವೇಕಾನಂದರು ಹೇಳತ್ತಾರೇ ದಿನದ ಐದು ನಿಮಿಷ ನಿನ್ನೊಡನೆ ಮಾತಾಡಿಲ್ಲ ಅಂದರೆ ಒಬ್ಬ ಮೇಧಾವಿಯ ಸಲಹೆಯನ್ನ ನಿರಾಕರಿಸಿದ ಹಾಗೆ ಅಂತಾ.ನೀವು ಏನು ಯೋಚಿಸುತ್ತೀರೋ ಅದೇ ನೀವು ಆಗುತ್ತೀರಿ" ಎಂಬ ಮಾತಿದೆ.ಹಾಗಾಗಿ ಯೋಚನೆಗಳಿಗೆ ತುಂಬಾ ಶಕ್ತಿಯಿದೆ

ಯಾವಾಗಲೂ ನಾವು ಪಾಸಿಟೀವ್ ಯೋಚನೆಗಳನ್ನೇ ಮಾಡಬೇಕು ಹೊರತು ಬೇರೆಯವರೂ ಏನ್ ಅಂತಾರೂ ಅಂತಾ ಬೇರೆಯವರ ಬಗ್ಗೆ ಯೋಚಿಸುವುದನ್ನ ನಿಲ್ಲಿಸಬೇಕು ನಮ್ಮನ್ನ ನಾವು ಪ್ರೀತಿಸಬೇಕು .ನಮ್ಮ ಬಗ್ಗೆ ಯಾವಾಗಲೂ ಧನಾತ್ಮಕ ಚಿಂತನೆಯನ್ನ ಮಾಡಬೇಕು ಬದುಕಿನಲ್ಲಿ ಬಹುಮುಖ್ಯ ಪಾತ್ರವಹಿಸುವುದು ನಮ್ಮ ಸಕರಾತ್ಮಕ ಚಿಂತನೆಗಳೇ.

ooo

## ಹೀಗಾದರೂ ಇರಬೇಕು



ಎಸ್. ತಿಪ್ಪೇಸ್ವಾಮಿ ಕಿಟ್ಟದಹಟ್ಟಿ

ಕೂಡಿ ಇಡಬೇಕು ಕೊಂಚವಾದರೂ ಕಷ್ಟಕ್ಕಾಗುವಂತೆ...
ನೆಮ್ಮದಿ ಇರಬೇಕು ಕೊಂಚವಾದರೂ ನಗುವು ಬರುವಂತೆ...

ಜೊತೆಗಾರರು ಇರಬೇಕು ಒಂದೆರಡು ಮಂದಿಯಾದರೂ ಒಳ್ಳೆಯ ಮಾತನಾಡುವುದಕ್ಕಾಗಿ...
ಪ್ರೀತಿಸುವವರು ನಮ್ಮ ಸುತ್ತಲೂ ಇರಬೇಕು ನಮ್ಮ ವಾತಾವರಣ ಶುದ್ಧವಾಗಿರುವುದಕ್ಕಾಗಿ...

ನೆನಪುಗಳು ಇರಬೇಕು ಸ್ವಲ್ಪವಾದರೂ
ಒಂಟಿಯಾಗಿ ಕುಳಿತಾಗ ಒಂದು ಕ್ಷಣ ಮನದಲ್ಲಿ ಬಂದು ಹೋಗುವುದಕ್ಕಾಗಿಯಾದರೂ...

ಸೋತವರು ನಮ್ಮ ಸ್ನೇಹಿತರಾಗಿರಬೇಕು ನಮಗೆ ಗೆಲುವಿನ ದಾರಿ ತೋರುವುದಕ್ಕಾಗಿ...
ತುಂಬು ಕುಟುಂಬ ಇರಬೇಕು ನಮ್ಮದೊಂದು ಸಂಬಂಧಗಳ ಬೆಲೆ ತಿಳಿಯುವುದಕ್ಕಾಗಿ.

ooo

# ಕನ್ನಡನಾಡು,......ನುಡಿಸಿರಿ



ವಸಂತ ಎಸ್ ಸತ್ಯನಾರಾಯಣ

ಬಾ ಧೀರ ಕನ್ನಡಿಗ ಹೆಮ್ಮೆಯಿಂದ ಹಾಡು
ತಾಯಿ ಕನ್ನಡಾಂಬೆಯ ಕರುಣೆಯ ಕೊಂಡಾಡು.
ಹಿರಿಕಿರಿಯರೆಲ್ಲರ ಒಲುಮೆಯ ನಾಡು
ಪರಭಾಷೆಗೂ ನೆಲೆನೀಡಿದ ತಾಯ ಸಿರಿಯ ನೋಡು.

ಬರುತಿಹುದು ರಾಜ್ಯೋತ್ಸವ ವರುಷಕೊಮ್ಮೆಯಂತೆ
ದಿನದಿನದ ಹಬ್ಬವಿದು ಇದಕೊಂದು ದಿನ ಏಕಂತೆ?
ನಾಡಿಗಾಗಿ ದುಡಿಯುವ ಮರೆತು ಎಲ್ಲ ಚಿಂತೆ
ನುಡಿಸಿರಿಯ ಕಣಜವನ್ನು ಹಾಡಿ ಹೆಚ್ಚಿಸೋಣವಂತೆ.

ರನ್ನ ಪಂಪ ಮುದ್ದಣರ ಕಾವ್ಯರಾಣಿ ಕನ್ನಡಾಂಬೆ
ಹೊಯ್ಸಳ ಚಾಲುಕ್ಯರ ಶಿಲ್ಪದಲ್ಲಿ ಜೀವತುಂಬೆ
ಜುಳುಜುಳು ನೀರಲೆಗಳಗಾನ ತಾಯಮೈಯತುಂಬೆ
ಹಸಿರುಹೊದ್ದು ನಗುವತಾಯ ಆರಾಧಿಸುವ ಪ್ರೀತಿತುಂಬಿ

ಹೊರನಾಡಲು ಧ್ವನಿಸುತ್ತಿಹ ಕನ್ನಡ ಸ್ವರಸಂಗಮ
ವಿಧವಿಧ ಪ್ರಾಕಾರದ ಕಲರವಗಳ ಸರಿಗಮ
ಕನ್ನಡ ತುತ್ತೂರಿಯ ಉಧ್ಘೋಷದ ಡಿಂಡಿಮ
ಮುಗಿಲೆತ್ತರ ಮಾರ್ದನಿಸಲಿ ಸುಸ್ವರಗಳ ಸಂಭ್ರಮ

ಕನ್ನಡ ನುಡಿ ನಮ್ಮ ಹೆಣ್ಣು
ನಮ್ಮ ತೋಟದಿನಿಯ ಹಣ್ಣು
ಬಳಕಬೇರೆ ಬೆಳೆದ ಹೆಣ್ಣು ಒಳಗೆ ಸುಳಿದಳು
ಎಂದ ಹಿರಿಯ ಕವಿವಾಣಿಯ ನಾವೆಲ್ಲಾ ಸ್ಮರಿಸೋಣ

ನಮ್ಮ ಹೆಣ್ಣ ಮೊದಲು ನಾವು ಗೌರವಿಸೋಣ
ಹೊರಗಿನಿಂದ ಬಂದ ಹೆಣ್ಣ ಆಧರಿಸೋಣ
ನಮ್ಮ ಭಾಷೆ ಅಳಿಯದಂತೆ ಕಾವಲಿರೋಣ
ಕನ್ನಡಕೆ ದುಡಿದವರ ಹೆಮ್ಮೆಯಿಂದ ಸ್ಮರಿಸೋಣ

OOO

# ಪ್ರವಾಸ ಕಥನ



ಸುಮ ಪ್ರಸಾದ್

ನವಂಬರ್ 2024ರಲ್ಲಿ 'ಜಿಎಸ್‌ಪಿ ಯೋಗಶಾಲ' ಬೆಂಗಳೂರು, ಇವರು ಆಯೋಜಿಸಿದ್ದ 'ರಿಷಿಕೇಶ್ ಯೋಗ ರಿಟ್ರೀಟ್' ನಲ್ಲಿ ಪಾಲ್ಗೊಳ್ಳುವ ಸದವಕಾಶ ದೊರಕಿತ್ತು. ಬಹಳ ಕಾತರದಿಂದ ರಿಷಿಕೇಶವನ್ನು ಸಂದರ್ಶಿಸಲು ಕಾಯುತ್ತಿದ್ದ ದಿನ ಬಂದಿತ್ತು. ರಿಷಿಕೇಶದಲ್ಲಿ ಇಳಿಯುತ್ತಿದ್ದಂತೆಯೇ ದೈವೀಕ ವಾತಾವರಣದ ದಿವ್ಯಾನುಭೂತಿಯ ಅನುಭವವಾಯಿತು. ವಸತಿ ಊಟದ ವ್ಯವಸ್ಥೆ ತುಂಬಾ ಚೆನ್ನಾಗಿತ್ತು. ವಸತಿಗೃಹದ ಸುಂದರ ವಾತಾವರಣ, ಸಾತ್ವಿಕ ಆಹಾರ ಎಲ್ಲವೂ ದೈಹಿಕ ಹಾಗೂ ಮಾನಸಿಕ ಸ್ಥಿರತೆಯನ್ನು ಕಾಪಾಡುವಲ್ಲಿ ಸಹಕಾರಿಯಾಗಿದ್ದವು. ಪ್ರತಿದಿನ ಯೋಗಾಭ್ಯಾಸ, ಪ್ರಾಣಾಯಾಮ, ಧ್ಯಾನ ಇವುಗಳ ಜೊತೆಗೆ ನಮ್ಮ ಹೆಮ್ಮೆಯ ಭಾರತೀಯ ಸಂಸ್ಕೃತಿ, ಪರಂಪರೆಯ ಪರಿಚಯ, ಅವುಗಳನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳುವುದರಿಂದ ಆಗುವ ಉಪಯೋಗ ಎಲ್ಲವನ್ನು ಸವಿಸ್ತಾರವಾಗಿ ಗುರುಗಳು ತಿಳಿಸಿಕೊಟ್ಟರು. ಬುದ್ಧಿಗೆ ಸವಾಲು ಹಾಕುವ ಅನೇಕ ಆಟಗಳಲ್ಲಿ ವಯಸ್ಸಿನ ಭೇದವಿಲ್ಲದೆ ಎಲ್ಲರೂ ಭಾಗವಹಿಸಿ ಸಂತೋಷಪಟ್ಟೆವು.

ರಿಷಿಕೇಶದಲ್ಲಿ ನಾವು ಸಂದರ್ಶಿಸಿದ ಕೆಲವು ಸ್ಥಳಗಳು:

1. ಗಂಗಾನದಿಯ ಎರಡೂ ದಡಗಳನ್ನು ಸೇರಿಸಲು ರಾಮ ಜೂಲ, ಲಕ್ಷ್ಮಣ ಜೂಲ, ಜಾನಕಿ ಜೂಲ ಎಂಬ ಸುಂದರ ಬೃಹತ್ ತೂಗುಸೇತುವೆಗಳನ್ನು ನಿರ್ಮಿಸಲಾಗಿದೆ.



2. ಭೂತನಾಥ ಗುಡ್ಡ– ಈ ಬೆಟ್ಟದಲ್ಲಿ ಶಿವ ಪಾರ್ವತಿಯ ವಿವಾಹ ಸಂದರ್ಭದಲ್ಲಿ ಭೂತಗಣದ ದಿಬ್ಬಣವನ್ನು ಶಿವನು ಇಲ್ಲಿಯೇ ನಿಲ್ಲಿಸಿದ್ದನು ಎಂಬ ಕಥೆ ಇದೆ.

3. ಮಣಿಕರ್ಣ ಬೆಟ್ಟ– ಆಂಜನೇಯನು ಮೂರ್ಛಿತನಾದ ಲಕ್ಷ್ಮಣನಿಗಾಗಿ ಇಲ್ಲಿಂದಲೇ ಸಂಜೀವಿನಿ ಬೇರನ್ನು ತೆಗೆದುಕೊಂಡು ಹೋಗಿದ್ದನೆಂಬ ಕಥೆ ಇದೆ.

4. ನೀಲಕಂಠ– ಸಮುದ್ರಮಥನದ ಸಂದರ್ಭದಲ್ಲಿ ಉತ್ಪತ್ತಿಯಾದ ವಿಷವನ್ನು ಲೋಕ ಕಲ್ಯಾಣಾರ್ಥವಾಗಿ ಶಿವನು ಕುಡಿದ ನಂತರ ಇಲ್ಲಿ ಬಂದು ತಪಸ್ಸು ಮಾಡಿದನೆಂಬ ಕಥೆ ಇದೆ. ಇಲ್ಲಿಂದ ಸ್ವಲ್ಪ ದೂರದಲ್ಲಿಯೇ ಪಾರ್ವತಿಯ ಮಂದಿರ ಕೂಡ ಇದೆ.



5. ಬೀಟಲ್ಸ್ ಆಶ್ರಮ –ಮಹರ್ಷಿ ಮಹೇಶ್ ಯೋಗಿ(1918–2008) ಯವರು ವೇದಕಾಲದ 'ಟ್ರಾನ್ಸೆಂಡೆಂಟಲ್ ಮೆಡಿಟೇಶನ್' ಅಭ್ಯಾಸದಿಂದ ಮಾನಸಿಕ ಉನ್ನತಿ ಸಾಧ್ಯ ಎಂದು ಸಾಧನೆಯ ಮೂಲಕ ತೋರಿಸಿ, ನೂರಾರು ಜನರಿಗೆ ಈ ವಿದ್ಯೆ ಕಲಿಸಿದರು. ಅಂದಿನ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ವಿದ್ಯಾಲಯದಲ್ಲಿ ವಿದೇಶಿ ವಿದ್ಯಾರ್ಥಿಗಳೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಧ್ಯಾನದ ಮಹತ್ವ ತಿಳಿದು ಕಲಿತು ಸಾಧಕರಾಗಿದ್ದರು. ಇಲ್ಲಿ ಯೋಗಭ್ಯಾಸದ 84 ಆಸನಗಳ ಸಾಧನೆಗಾಗಿ 84 ಕುಟೀರಗಳನ್ನು ನಿರ್ಮಿಸಿದ್ದಾರೆ ಇದನ್ನು 'ಚೌರಾಸಿಕುಟಿಯ' ಎಂದು ಕರೆಯುತ್ತಾರೆ.



ದೇವಪ್ರಯಾಗದಲ್ಲಿ ಭಾಗೀರಥಿ ಮತ್ತು ಅಲಕನಂದಾ ನದಿಗಳು ಸೇರಿ ಗಂಗಾನದಿಯಾಗಿ ರಿಷಿಕೇಶದಲ್ಲಿ ಹರಿಯುತ್ತದೆ. ಸಂಜೆಯ ಗಂಗಾ ಆರತಿಯ ವೈಭವ ಕಣ್ಣಿಗೆ ಹಬ್ಬ. ಬೆಟ್ಟಗಳ ನಡುವೆ ತುಂಬಿ ಹರಿಯುವ ಗಂಗಾ ನದಿಯಲ್ಲಿ" ರಿವರ್ ರಾಫ್ಟಿಂಗ್" ನ ಅನುಭವ ಅನನ್ಯವಾದದ್ದು.



ಹತ್ತಿರದಲ್ಲೇ ಇರುವ ಕುಂಜಾಗಿರಿ ಬೆಟ್ಟದಲ್ಲಿ ಪಾರ್ವತಿದೇವಿಯ ಶಕ್ತಿಪೀಠವಿದೆ. ಶಿವನು ಪಾರ್ವತಿದೇವಿಯ ಕಳೇಬರವನ್ನು ಹೆಗಲ ಮೇಲೆ ಹೊತ್ತು ತಾಂಡವನೃತ್ಯ ಮಾಡಿದಾಗ ದೇವಿಯ ಭುಜದ ಭಾಗ ಇಲ್ಲಿ ಬಿದ್ದಿರುವುದೆಂಬ ನಂಬಿಕೆಯಿದೆ. ಇದು ಆದಿಗುರು ಶ್ರೀ ಶಂಕರಾಚಾರ್ಯ ಸ್ಥಾಪಿತ ಪೀಠವಾಗಿದೆ. ಈ ಬೆಟ್ಟದಿಂದ ಸೂರ್ಯೋದಯದ ಅನುಪಮ ಸೌಂದರ್ಯ ನೋಡಲು ಎರಡು ಕಣ್ಣು ಸಾಲದು. ಮುಂಜಾವಿನ ನಾಲ್ಕು ಗಂಟೆಯಿಂದ ಸೂರ್ಯೋದಯ ವೀಕ್ಷಿಸಲು ಕಾತರದಿಂದ ಕಾದಿದ್ದೆವು. ಹಿಮಾಲಯ ಬೆಟ್ಟಸಾಲುಗಳ ಹಿನ್ನೆಲೆಯಲ್ಲಿ ಸೂರ್ಯ ಉದಯಿಸುವ ದೃಶ್ಯ ವರ್ಣನಾತೀತ. ಅಸಂಖ್ಯಾತ ಪ್ರವಾಸಿಗರಿಂದ ತುಂಬಿ ತುಳುಕುತ್ತಿದ್ದರೂ ರಿಷಿಕೇಶ ತನ್ನದೇ ಆದ ಪ್ರಶಾಂತ ವಾತಾವರಣದ ವಿಶೇಷತೆಯಿಂದ ಮನಸ್ಸಿಗೆ ಶಾಂತಿ ನೀಡುತ್ತದೆ. ಪರಿಶುದ್ಧ, ಪವಿತ್ರ ಗಂಗಾ ನದಿಯಲ್ಲಿ ಮಿಂದು, ದಡದಲ್ಲಿ ಕಣ್ಮುಚ್ಚಿ ಕುಳಿತರೆ ಜಗವನ್ನೇ ಮರೆಸುವ ದೈವೀಕ ವಾತಾವರಣ. ಮತ್ತೆ ಮತ್ತೆ ಭೇಟಿ ನೀಡಬೇಕೆನ್ನಿಸುವ ಇಂತಹ ತಪೋಭೂಮಿಗೆ ನಮೋ ನಮಃ.

ooo

# ಪ್ರೇಮ ನಿವೇದನೆ ಇಂದಾಗಲಿ ಅನುಮೋದನೆ



ಹನುಮಂತರಾಯಪ್ಪ

ಹೂವಿನ ಅಂಬನು ಎಸೆಯಲು ಕಾಮ
ಇಮ್ಮನಗಳ ಸೋಂಕಿ ಉದಿಸಲು ಪ್ರೇಮ
ಅರಸುವವೆರಡು ಭಂಗ ತಾರದ ಧಾಮ
ಜೊತೆಗಿರಲೇಬೇಕೆಂದು ಬಯಸಿ ಸೋಮ

ಇಚ್ಛಿಸುವುದು ಸಹಜವಲ್ಲವೇ ಏಕಾಂತ
ವಾತಾವರಣವಿರಬೇಕೆನ್ನುತ ಪ್ರಶಾಂತ
ಮನದ ಪಿಸು ಮಾತು ಮುಟ್ಟಿ ದಿಗಂತ
ಪ್ರತಿಧ್ವನಿಸಿ ಚುಂಬಿಸಲಿ ಹೃದಯ ಅಂತ



ಪ್ರೇಮ ನಿವೇದನೆಯ ಸಾಂಕೇತಿಕ ಪುಷ್ಪ
ವಿನಿಮಯವಾದೊಡೆ ಆನಂದ ಬಾಷ್ಪ
ಸುರಿಸುತ ಕುಣಿವುದು ಹೃದಯಗಳ ವಿಶ್ವ
ಕಲ್ಪನೆಯಲಿ ಓಡುವುದು ಮನದ ಅಶ್ವ

ಪರಸ್ಪರ ಅರ್ಥೈಸಿಕೊಂಡರೆ ನೈಜ ಪ್ರೀತಿ
ತಿಳಿ ಬಾಳನುದ್ದಕ್ಕೂ ಹಳಸದ ಬುತ್ತಿ
ಅಂಗ ಸೌಷ್ಟವ ಬಯಸದೊಲವು ನಿಷ್ಕಲ್ಮಶ
ವ್ಯಕ್ತಿತ್ವಕ್ಕೆ ಜೋಡಿಸಿಟ್ಟಂತೆ ಸ್ವರ್ಣ ಕಳಶ

ooo

# ಕ್ಷೇತ್ರ ಪರಿಚಯ-ಶ್ರೀಕ್ಷೇತ್ರ ಮಂಜುಗುಣಿ



ಲೋಲಾಕ್ಷಿ ಹುಲ್ಕುಳಿ

ಕೆಲವು ವರ್ಷಗಳ ಕೆಳಗೆ ಬೇಟಿ ನೀಡಿದ ಮಂಜುಗುಣಿ ಕ್ಷೇತ್ರದ ಬಗ್ಗೆ ತಿಳಿಸಲು ಇಷ್ಟಪಡುತ್ತೇನೆ.







ಈ ಕ್ಷೇತ್ರ ವು ಉತ್ತರ ಕನ್ನಡ ಜಿಲ್ಲೆಯ ಸಿರಸಿ ತಾಲ್ಲೂಕಿನಲ್ಲಿದೆ . ಸಿರಸಿ ಕುಮಟಾ ಮಾರ್ಗಮಧ್ಯದ ಕಾಡಿನೊಳಗಿದೆ. ಸಿರಸಿಯಿಂದ 26 km ಹಗೂ ಕುಮಟಾದಿಂದ 35 km ದೂರದಲ್ಲಿದೆ. ಈ ಕ್ಷೇತ್ರದಲ್ಲಿ ವೆಂಕಟರಮಣ ಸ್ವಾಮಿ ಹಾಗೂ ಪದ್ಮಾವತಿ ಅಮ್ಮನವರ ದೇವಾಲಯವಿದೆ. ಈ ಕ್ಷೇತ್ರ ಕ್ಕೆ ಚಿಕ್ಕ ತಿರುಪತಿ ಹಾಗೂ ಕರ್ನಾಟಕದ ತಿರುಪತಿ ಎಂದು ಕರೆಯುತ್ತಾರೆ.

ಕಾಡಿನ ಮಧ್ಯದ ಒಂದು ರಮಣೀಯ ಸ್ಥಳದಲ್ಲಿ ಇರುವ ಈ ಕಲ್ಲಿನ ದೇವಾಲಯವು 1300 ವರ್ಷದ ಇತಿಹಾಸವನ್ನು ಹೊಂದಿದೆ. ತಿರುಮಲ ಎಂಬ ಯೋಗಿ ಇದನ್ನು ಸ್ಥಾಪಿಸಿದನು.

ಈ ಕ್ಷೇತ್ರ ಕ್ಕೆ ಒಂದು ಪುರಾತನ ಇತಿಹಾಸವಿದೆ. ಅದೇನಂದರೆ . ತಿರುಮಲ ಎಂಬ ಯೋಗಿಯು ಜ್ಞಾನಾರ್ಜನೆಗಾಗಿ ದೇಶಪರ್ಯಟನೆಮಾಡುತ್ತಾ ಬಂದು ಮಂಜುಗಣೀಯ ಸಮೀಪದ ಗಿಲ್ಲಿ ಗುಂಡಿ ಎಂಬಲ್ಲಿ ಧ್ಯಾನಕ್ಕೆ ಕುಳಿತು ಕೊಳ್ಳುತ್ತಾನೆ. ಅದೇ ಸಂದರ್ಭದಲ್ಲಿ ಶ್ರೀ ವೆಂಕಟರಮಣ ಸ್ವಾಮಿ ದೇವರು ಬೇಟೆಯಾಡುತ್ತಾ ಮಂಜುಗಣಿಗೆ ಬರುತ್ತಾರೆ. ಬೇಟೆ ಯಾಡಿದನಂತರ ದಣಿವನ್ನು ಆರಿಸಿಕೊಳ್ಳಲು ಒಂದು ಕಲ್ಲು ಬಂಡೆಯ ಮೇಲೆ ಕುಳಿತುಕೊಳ್ಳುತ್ತಾರೆ. ತುಂಬಾ ಹೊತ್ತು ಅಲ್ಲಿ ಯೇ ವಿಶ್ರಮಿಸುತ್ತಾರೆ.

ಇದೇ ಸಂದರ್ಭದಲ್ಲಿ ಧ್ಯಾನದಲ್ಲಿ ಇರುವ ತಿರುಮಲ ಯೋಗಿಗೆ ವೆಂಕಟರಮಣ ಸ್ವಾಮಿ ದೇವರು ಕನಸಿನಲ್ಲಿ ನಾನು ವಿಶ್ರಮಿಸಿದ ಈ ಸ್ಥಳದಲ್ಲಿ ನನ್ನನ್ನು ಸ್ಥಾಪನೆ ಮಾಡು ಎಂದರಂತೆ. ಅದರಂತೆ ಯೋಗಿಯು ಈ ಸ್ಥಳದಲ್ಲಿ ವೆಂಕಟರಮಣ ಸ್ವಾಮಿ ದೇವರನ್ನು ಸ್ಥಾಪನೆ ಮಾಡುತ್ತಾನೆ. ಮುಂದೆ ವಾದಿರಾಜ ತೀರ್ಥರು ಇಲ್ಲಿಗೆ ಬಂದಾಗ ಧ್ವಜಸ್ಥಂಭವನ್ನು ಸ್ಥಾಪಿಸುತ್ತಾರೆ. ಮುಂದೆ ಈ ಸ್ಥಳ " ಚಿಕ್ಕ ತಿರುಪತಿ" ಹಾಗೂ " ಕರ್ನಾಟಕದ ತಿರುಪತಿ" ಎಂಬ ಪ್ರಖ್ಯಾತಿ ಯನ್ನು ಹೊಂದುತ್ತಾ ಬಂದಿದೆ.

ಈ ದೇವಾಲಯದ ಕೆತ್ತನೆಗಳು ವಿಜಯನಗರ ಶೈಲಿಯಲ್ಲದೆ ಇಲ್ಲಿ ವರ್ಷಕ್ಕೊಮ್ಮೆ ನಡೆಯುವ ರಥೋತ್ಸವು ಪ್ರಸಿದ್ಧಿ ಪಡೆದಿದೆ. ದೇವಾಲಯದ ಬಲಭಾಗದಲ್ಲಿ ತುಂಬಾ ದೊಡ್ಡದಾದ ಸ್ವಚ್ಛ ನೀರಿನ ಕೊಳವಿದೆ. ಇತ್ತೀಚೆಗೆ ಈ ಕ್ಷೇತ್ರವು ಪವಿತ್ರ ಯಾತ್ರಾ ಸ್ಥಳದಜೊತೆಗೆ, ಪ್ರಸಿದ್ಧ ಪ್ರವಾಸಿ ತಾಣವಾಗುತ್ತಿದೆ.

ooo



# ದ್ವೇಷವೆಂಬ ವಿಷ = ಸ್ವಯಂ ನಾಶ



ಪಲ್ಲವಿ ಎಮ್

ಹೌದು "ದ್ವೇಷ " ವೆಂಬ ವಿಷವು ನಮ್ಮ ಮನದೊಳಗೆ ಸೇರಿದರೆ ಸಾಕು ಅದು ನಮ್ಮನ್ನೇ ನಾಶ ಪಡಿಸುತ್ತದೆ. ಆದ್ದರಿಂದ ಈ ವಿಷವು ನಮ್ಮ ಮನದೊಳಗೆ ಹೊಕ್ಕದಂತೆ ನಾವು ತುಂಬಾ ಜಾಗರೂಕತೆಯಿಂದ ಇರಬೇಕು.

ಈ ದ್ವೇಷವು ಯಾವಾಗ ಬರುತ್ತದೆಯೆಂದರೆ, ಬೇರೆಯವರಿಂದ ಅವಮಾನಕ್ಕೊಳಗಾದಾಗ, ನಾವಿರುವಂತೆಯೇ ನಮ್ಮನ್ನು ಒಪ್ಪಿಕೊಳ್ಳದಿದ್ದಾಗ, ನಾವು ಬೇರೆಯವರಿಂದ ಬಯಸಿದ್ದು ನಮಗೆ ಸಿಗದೇ ಇದ್ದಾಗ, ನಾವು ಅಂದುಕೊಂಡಿದ್ದನ್ನು ಸಾಧಿಸಲು ಬೇರೆಯವರು ಅಡ್ಡಿ ಪಡಿಸಿದಾಗ ಹೀಗೆ ಹಲವಾರು ಕಾರಣಗಳಿಂದಾಗಿ ಈ ದ್ವೇಷವೆಂಬ ವಿಷ ನಮ್ಮ ಮನದಲ್ಲಿ ಹುಟ್ಟಿಕೊಳ್ಳುತ್ತದೆ. ಹುಟ್ಟಿಕೊಂಡು ನಮ್ಮನ್ನೇ ಅದು ಕೊಲ್ಲುತ್ತದೆ, ಆದರೆ ಅದರ ಅರಿವು ನಮಗೆ ಬರುವುದಿಲ್ಲ.

ನಾವು ಒಬ್ಬರ ಬಗ್ಗೆ ದ್ವೇಷ ಸಾಧಿಸಲು ಹೋದರೆ, ಅದು ನಮ್ಮ ಮನವನ್ನು ಮಾತ್ರವಲ್ಲದೆ ದೇಹವನ್ನೂ ಬಾಧಿಸುತ್ತದೆ ಯಾಕೆಂದರೆ ಅವರ ಬಗ್ಗೆ ದಿನಾ ನಾವು ಮನದಲ್ಲಿ ಕೆಟ್ಟದಾಗಿ ಯೋಚಿಸುತ್ತೇವೆ, ಈ ಯೋಚನೆಯಿಂದ ನಮಗೆ ನೆಮ್ಮದಿ ಎಂಬುದು ಇರುವುದಿಲ್ಲ, ರಾತ್ರಿ ನಿದ್ದೆಯೂ ಬರುವುದಿಲ್ಲ,

ಇದೆಲ್ಲದರ ಪರಿಣಾಮ ದೇಹದ ಆರೋಗ್ಯ ಕೆಡುತ್ತದೆ, ನಮಗೆ ಸಾಧಿಸಿ ತೋರಿಸುವಂತಹ ಎಷ್ಟೋ ಅವಕಾಶಗಳು ಕಣ್ಣೆದುರಿಗೆ ಇದ್ದರೂ ಈ ದ್ವೇಷವೆಂಬುದು ಅದನ್ನು ಮರೆಸುತ್ತದೆ. ಸದಾ ಕಾಲ, ನಾವು ಅವನಲ್ಲಿ / ಅವಳಲ್ಲಿ, ದ್ವೇಷ ಸಾಧಿಸುವುದು ಹೇಗೆ ಎಂಬುದನ್ನೇ ಯೋಚಿಸುತ್ತಿರುವುದರಿಂದ, ನಮ್ಮ ಒಳತಿನ ಕಡೆ ನಾವು ಗಮನ ಹರಿಸುವುದೇ ಇಲ್ಲ.

ದಿನದಿಂದ ದಿನಕ್ಕೆ ದ್ವೇಷವೆಂಬ ವಿಷ ನಮ್ಮ ತನು ಮನದಲ್ಲಿ ಹರಡಿ ಅದು ನಮ್ಮನ್ನೇ ಸರ್ವ ನಾಶ ಮಾಡುತ್ತದೆ. ನಾವು ಯಾರ ಬಗ್ಗೆ ದ್ವೇಷ ಪಡುತ್ತಿದ್ದೇವೆಯೋ ಅವರಿಗಂತೂ ಇದು ಯಾವ ಪರಿಣಾಮವನ್ನು ಬೀರಲಾರದು. ಅವರ ಪಾಡಿಗವರು ಸಂತೋಷವಾಗಿರುತ್ತಾರೆ. ಹಾಗಾಗಿ ನಾವು ದ್ವೇಷ ಸಾಧಿಸಲು ಹೋಗಲೇ ಬಾರದು

ಮನುಷ್ಯನಾಗಿ ಹುಟ್ಟಿದ ಮೇಲೆ ದ್ವೇಷ, ಕೋಪ, ಮದ, ಮತ್ಸರ ಎಲ್ಲಾ ಇದ್ದೇ ಇರುತ್ತದೆ ಆದರೆ ಅದನ್ನು ಮಿತಿ ಮೀರಿ ಬೆಳೆಯಲು ಬಿಡಬಾರದು, ನಮ್ಮ ಹಿಡಿತದಲ್ಲಿರಬೇಕು ಅದು. ಅದು ನಮ್ಮನ್ನು ಆಳುವಂತೆ ಎಂದಿಗೂ ಮಾಡಿಕೊಳ್ಳಬಾರದು.

ಹಾಗಾದರೆ ಈ ದ್ವೇಷವನ್ನು ಹೇಗೆ ನಿಯಂತ್ರಿಸುವುದು?

ನಮಗೆ ಯಾರದ್ದೋ ಮೇಲೆ ದ್ವೇಷ ಬಂದರೆ ಅವರನ್ನು ಮರೆತು ಬಿಡುವುದು, ಅವರಲ್ಲಿ ಮಾತಿಗೆ ಮಾತು ಬೆಳೆಸದಿರುವುದು, ಸಾಧ್ಯವಾದರೆ ಕ್ಷಮಿಸಿ ಬಿಡುವುದು, ಇಲ್ಲವಾದರೆ, ಅವರ ಜೊತೆಗೆ ಯಾವುದೇ ವ್ಯವಹಾರ ಇಟ್ಟು ಕೊಳ್ಳದೆ ನಮ್ಮ ಪಾಡಿಗೆ ನಾವಿರುವುದು, ದ್ವೇಷ ಸಾಧಿಸುವುದಾದರೆ,ಅವಮಾನ ಮಾಡಿದವರ ಮುಂದೆ ನಾವು ಸಮ್ಮಾನ ಮಾಡಿಕೊಳ್ಳುವಂತೆ ಸಾಧಿಸಿ ತೋರಿಸಬೇಕು. ಹುಟ್ಟಿದ ದ್ವೇಷ ನಮ್ಮ ಏಳಿಗೆಗೆ, ಸಾಧನೆಗೆ ಕಾರಣವಾಗಬೇಕೇ ಹೊರತು ನಮ್ಮ ಅವನತಿಗೆ ಎಂದೂ ಕಾರಣವಗಬಾರದು.

ಧ್ಯಾನ, ಯೋಗ, ದೇವರ ನಾಮ ಸ್ಮರಣೆ, ಭಜನೆ ಮುಂತಾದವುಗಳನ್ನು ಮಾಡುವುದರಿಂದ ಮನಸ್ಸನ್ನು ನಿಯಂತ್ರಣದಲ್ಲಿಟ್ಟುಕೊಳ್ಳಬಹುದು. ದ್ವೇಷ ಕ್ಕೆ ತುಪ್ಪ ಸುರಿದು ಅದನ್ನು ದೊಡ್ಡ ಮಾಡದೆ ಅದನ್ನು ಮನದಿಂದ ಹೊರತೆಗೆದು ಅಳಿಸಿ ಹಾಕಬೇಕು. ನಮ್ಮ ಮನಸ್ಸನ್ನು ಒಳ್ಳೆಯ ಚಿಂತನೆಯತ್ತ ಕೊಂಡೊಯ್ಯ ಬೇಕು, ಅವರಿವರಲ್ಲಿ ದ್ವೇಷ ಮಾಡಿಕೊಂಡು ನಾವೇನು ಸಾಧಿಸಲಾರೆವು, ದ್ವೇಷ ಸಾಧಿಸಿ ಬೇರೆಯವರನ್ನು ಅಳಿಸಿ ಹಾಕುವ ಯೋಚನೆಯಲ್ಲಿ ನಾವೇ ಅಳಿದು ಹೋಗುವುದು ನಾವು ತಿಳಿಯಲಾರೆವು. ಹಾಗಾಗಿ ದ್ವೇಷ ಪಟ್ಟುಕೊಂಡು ನಮ್ಮನ್ನೇ ನಾವು ಸರ್ವ ನಾಶ ಮಾಡಿಕೊಳ್ಳುವ ಮೊದಲು ಎಚೆತ್ತುಕೊಳ್ಳೋಣ.

ದ್ವೇಷ ಹುಟ್ಟಿದ್ದೇ ಆದಲ್ಲಿ, ಅದು ನಮ್ಮ ಏಳಿಗೆಗೆ, ಸರ್ವತೋಮುಖ ಬೆಳವಣಿಗೆಗೆ ಕಾರಣವಾಗುವಂತೆ ಮಾರ್ಪಡಿಸಿಕೊಳ್ಳೋಣ.

ooo



# ಜಗತ್ತು



ಆಶಾ ಲಕ್ಷ್ಮಣ್ ರಾವ್



ಜಾಗೃತ ಜಗತ್ತು ನಮ್ಮದು
ನೆಮ್ಮದಿ ಇರದ ತಾಣವಿದು
ಹೇಳದೆ ಕೇಳದೆ ಸುಖವಿಹುದು
ತಿಳಿಯದೆ ಬರುವ ಸಾವಿಹುದು//

ಸುತ್ತಲು ಮುತ್ತಲು ಕೇಡಿಹುದು
ಕಾಡುವ ಜನಗಳ ಕೆಡಕಿಹುದು
ನಟಿಸುವ ಜನರ ನಗುವಿಹುದು
ಕೆಲಸಕೆ ಬಾರದ ಮಾತಿಹುದು//

ಮುಗ್ಧತೆ ಹೊತ್ತ ಮುಖವಾಡವಿದೆ
ಮುಖವಾಡದ ಹಿಂದೆ ಕ್ರೌರ್ಯವಿದೆ
ಕ್ರೌರ್ಯದ ತುಂಬಾ ಸ್ವಾರ್ಥವಿದೆ
ಸ್ವಾರ್ಥದ ಸಾಧನೆಯ ನೀಚತನವಿದೆ//

ಮಾನವೀಯತೆ ಮಾಯಾವಾಗಿದೆ
ಪಶುಪಕ್ಷಿಗಳ ಸಾವು ತಡೆಯದಾಗಿದೆ
ನಾರಿಯ ಮಾನವು ಹರಣವಾಗಿದೆ
ಎಲ್ಲೆಲ್ಲೂ ಕ್ರೂರತೆಯು ಎಲ್ಲೆ ಮೀರಿದೆ//

ooo

# ಬಿಟ್ಟರು ಬಿಡದು ಪ್ರೀತಿಯ ಮಾಯೇ



**ಹೇಮಂತ್ ಬಸಪ್ಪನದೊಡ್ಡಿ**

ಕಾನ್ಫರೆನ್ಸ್ ಹಾಲ್ನಲ್ಲಿ ಕೊನೆಯ ಬಲ ಭಾಗದಲ್ಲಿ ಕೂತ್ತಿದ್ದ ವಿಖ್ಯಾತ್ನನ್ನು ಕಂಡು,ಅಲ್ಲ ಅವನು ಯಾಕೆ ಯಾರ್ ಜೊತೇನು ಸೇರಲ್ಲ?ಯಾವಾಗ್ಲೂ ಒಬ್ಬನೇ ಇರ್ತಾನೆ, ಲಂಚ್ ಬ್ರೇಕ್ ಗೆ ಒಬ್ಬನೇ ಹೋಗ್ತಾನೆ,ಅದೇ ಮೀಟಿಂಗಲ್ಲಿ ಐಡಿಯಾ ಕೇಳಿದ್ರೆ ಬ್ರಿಲಿಯಂಟ್ ಐಡಿಯಾ ಬರುತ್ತೆ.ಒಂದ್ ರೀತಿ ಯುನಿಕ್ ಮನುಷ್ಯ.ಅವನ್ ಹೆಸರು ಏನು ಎಂದು ತರುಣ್ ಕೇಳಿದಾಗ ಅವನು ವಿಖ್ಯಾತ್ ವಿಕ್ಕಿ ಅಂತ,ನನಗೂ ತುಂಬಾ ಸರಿ ಅನ್ನಿಸಿದೆ ಒಂದ್ ರೀತಿ ನಿಗೂಢ ಮನುಷ್ಯ ಎಂದು ಅಖಿಲ್ ಹೇಳಿದ.ಓಹ್ ನಮ್ ಗುರು ಪೂಜಂತೇ ಅವರ ಪಾತ್ರಧಾರಿ ಮಂದಣ್ಣ ತರ ಅಲ್ವಾ ತರುಣ್ ಎಂದು ಅಖಿಲ್ ಹೇಳಿದಾಗ ಸ್ವಲ್ಪ ಹಾಗೆ ಎಂದ.ಅಲ್ಲ ಗುರು ಒಂದು ತಿಂಗಳು ಲಾಂಗ್ ಲೀವ್ ಹೋಗಿದ್ಕೆ ಹೀಗೆ, Dude I want to know about him he is very interesting and ಏನೋ ಟ್ರಾಜಿಡಿ ಕಥೆ ಇದೆ ಅನ್ಸುತ್ತೆ.ಸರಿ ಬಾ ಸ್ಮಿತಾ ಹತ್ರ ಕೇಳೋಣ ಎಂದು ಅಖಿಲ್ ತರುಣ್ ಕರೆದುಕೊಂಡು ಅಡ್ಮಿನ್ ಕ್ಯಾಬಿನ್ ಗೆ ಹೋದ.

ಅಡ್ಮಿನ್ ಕ್ಯಾಬಿನ್ ಗೆ ಬಂದು ಸ್ಮಿತಾ ಆರ್ ಯೂ ಫ್ರೀ ನೌ ಎಂದು ಅಖಿಲ್ ಕೇಳಿದಾಗ ಫಿಫ್ಟೀನ್ ಮಿನುಟ್ಸ್ ಅಕಿ ಐ ವಿಲ್ ಕಮ್, ಬಿ ಇನ್ ಕೆಫೆಟೇರಿಯಾ ಎಂದಳು.ಆಗ ತರುಣ್ ಅಲ್ಲ ಬ್ರೋ ಸ್ಮಿತಾಗೆ ಹೇಗ್ ಗೊತ್ತು ವಿಕ್ಕಿ ಬಗ್ಗೆ ಎಂದಾಗ ಅವರಿಬ್ಬರೂ ಕಾಲೇಜ್ ಫ್ರೆಂಡ್ಸ್ ಎಂದು ಅಖಿಲ್ ಹೇಳಿದ.

ಇಬ್ಬರೂ ಕೆಫೆಟೇರಿಯಾದಲ್ಲಿ ಕೂತಿದ್ದಾಗ ಸ್ಮಿತಾ ಬಂದು ಏನು ಅಕೌಂಟ್ಸ್ ಮತ್ತು ಫೈನಾನ್ಸ್ ಇಬ್ಬರೂ ಒಟ್ಟಿಗೆ ಸೇರಿ ಅಡ್ಮಿನ್ ಹತ್ರ ಬಂದಿದ್ದೀರಾ?ಎಂದು ಕೇಳಿದಾಗ.ಏನಿಲ್ಲ ಸ್ಮಿತಾ ಒಂದು ಬಯೋ ಡಾಟಾ ಬೇಕಿತ್ತು ಎಂದು ತರುಣ್ ಕೇಳಿದಾಗ,ಯಾರ್ ಬಗ್ಗೆ ಆ ಜೂನಿಯರ್ ಶ್ವೇತಾ ಬಗ್ಗೆ ನಾ.ಇಲ್ಲ ಮಾ ನಿನ್ ಫ್ರೆಂಡ್ ವಿಕ್ಕಿ ಬಗ್ಗೆ ಎಂದು ಅಖಿಲ್ ಹೇಳಿದಾಗ.ವಿಕ್ಕಿ ಬಗ್ಗೆನಾ ಯಾಕೆ?ಏನ್ ಮಾಡಿದ ನಮ್ ಹುಡ್ಗ.ಏನಿಲ್ಲ, ವಿಕ್ಕಿ ಒಂದ್ ರೀತಿ ಇಂಟ್ರೆಸ್ಟಿಂಗ್.ಆದ್ರೆ ಏನೋ ದೊಡ್ಡ ಕಥೆ ಇದೆ ಅನ್ಸುತ್ತೆ ಎಂದು ತರುಣ್ ಕೇಳಿದ.ಆಗ ಸ್ಮಿತಾ ಹ್ಮ್ಮ ಕಥೆ ಇದೆ,ನಮ್ ವಿಕ್ಕಿ ಜೆಮ್ ಆಫ್ ಪರ್ಸನ್ ಅಂತಾರಲ್ಲ ಹಾಗೆ.ನಂದು ವಿಕ್ಕಿ ಸ್ನೇಹ 6ವರ್ಷ ಡಿಗ್ರಿ ಮತ್ತೆ ಮಾಸ್ಟರ್ಸ್.ಈಗಿರೋ ವಿಕ್ಕಿಗೂ ಅವಗಿನ ವಿಕ್ಕಿಗೂ,ಅಜಗಜಾಂತರ ವ್ಯತ್ಯಾಸ.ಒಂದ್ ರೀತಿ

ಯಾವ್ದಕ್ಕೂ ಕೇರ್ ಮಾಡ್ಡೀರಾ, ಕೂಲ್ ಆಗಿರೋನು.ಮತ್ತೆ ಯಾಕ್ ಹೀಗೆ ಎಂದು ತರುಣ್ ಕೇಳಿದ.ವಿಕ್ಕಿ ನಮ್ಮತರ ಮಿಡಲ್ ಕ್ಲಾಸ್.ಅಪ್ಪ ಅಮ್ಮ ತಮ್ಮ ಅಷ್ಟೇ ಅವನ ಪ್ರಪಂಚ.ಹತ್ತನೇ ತರಗತಿಯಲ್ಲಿದ್ದಾಗ ಅವರ ಅಪ್ಪ ಫ್ಯಾಕ್ಟರಿಲಿ ಕೆಲಸ ಮಾಡುವಾಗ ಮರ ಕತ್ತರಿಸುವ ಮಿಷನ್ ಫೋರ್ಸ್ಗೆ ಬೆಲ್ಟ್ ಕಟ್ಟಾಗಿ ಬಲಗಾಲಿನ ಮಂಡಿವರೆಗೂ ಕಟ್ಟ್ ಆಯಿತು.ಒಂದ್ ರೀತಿ ಮರದ ಬೇರು ಸಡಿಲಗೊಂಡಂತೆ.ಆಗ ಊರಿನಲ್ಲಿದ್ದ ಹಾಲಿನ ಡೈರಿಯಲ್ಲಿ ಹಾಲಿನ ಶುದ್ಧತೆ ಮತ್ತು ಅಳತೆ ಮಾಪನ ಮಾಡುವ ಕೆಲಸಕ್ಕೆ ಸೇರಿಕೊಂಡ. ಬೆಳಗ್ಗೆ ವಿಕ್ಕಿ ಇದ್ರೆ ಸಂಜೆ ಕಾಲೇಜೆಯಿಂದ ಬರೋವರ್ಗು ಅವನ ತಮ್ಮ ಇರ್ತಿದ್ದ, ಆಮೇಲೆ ಇಬ್ಬರು ಒತ್ತಿಗೂ ಸೇರಿ ಎಲ್ಲ ಕ್ಲೀನ್ ಮಾಡಿ ಹೋಗ್ತಿದ್ರು. ಡಿಗ್ರಿಗೆ ನಮ್ ಕಾಲೇಜ್ ಸೇರಿಕೊಂಡ.ಇಬ್ಬರೂ ಒಂದೇ ಕ್ಲಾಸ ಅಂತ ಅಕಿಲ್ ಕೇಳಿದಾಗ ಹ್ಮ್ ಇಬ್ಬರೂ ಒಂದೇ ಕ್ಲಾಸ್,ಒಳ್ಳೆ ಬಾಂಡಿಂಗ್ ಇತ್ತು ಎಂದಳು ಸ್ಮಿತಾ.ಆಗ ತರುಣ್ ಹೌದ ಮತ್ತೆ ಯಾಕ್ ಹೀಗೆ ಎಂದಾಗ ಬಿಟ್ಟರು ಬಿಡದು ಪ್ರೀತಿಯ ಮಾಯೇ ಎಂದು ಸ್ಮಿತಾ ಹೇಳಿದಾಗ ಯಾರು ಆ ಬಾಲೆ ನಮ್ ಹುಡ್ಗನ ಮನಸ್ಸನ್ನ ಕದ್ದ ಚೋರಿ.ಸಾಹಿತ್ಯ ಎಂದಾಗ ನೈಸ್ ನೇಮ್ ಸ್ಮಿತಾ ಎಂದು ಅಖಿಲ್ ಹೇಳಿದ.ನೇಮ್ ಅಷ್ಟೇ ಅಲ್ಲ,ಸಾಹಿತ್ಯ ಕೂಡ ನೈಸ್,ಬೇರೆ ಸೇಕ್ಷನ್ ಆದ್ರೂ ಅದು ಹೇಗೆ ಪರಿಚಯ ಆಗಿ ಲವ್ ಆಯಿತೋ ಗೊತ್ತಿಲ್ಲ.ಬಟ್ ಇಬ್ಬರೂ ಮೇಡ್ ಫಾರ್ ಈಚ್ ಅದರ್ ಅನ್ನೋ ತರ ಇದ್ದರೂ.ಸ್ಮಿತಾ ಡೂ ಯು ಹ್ಯಾವ್ ಕಪಲ್ ಫೋಟೋ ಎಂದು ತರುಣ್ ಕೇಳಿದ.ಆಗ ಸ್ಮಿತಾ ತನ್ನ ಫೋನಿನಲ್ಲಿದ ಮೂವರು ಜೊತೆ ಇದ್ದ ಫೋಟೋ ತೋರಿಸಿದಾಗ.ಹೌದು ಪಕ್ಕ ಹೇಳಿ ಮಾಡಿಸಿದ ಜೋಡಿ ಮತ್ತೆ ಯಾಕೆ ದೂರ ಆದ್ರೂ ಎಂದ ಅಕಿಲ್.ದೂರ ಆಗಿಲ್ಲ ಅಕಿ ದೂರ ಮಾಡಿದ್ದು.ಕಾಲೇಜ್ ಅಲ್ಲಿ ನಮ್ಗೆ ಒಂದ್ ನೇಮ್ ಇತ್ತು ರಾಧೆ ಕೃಷ್ಣ ರುಕ್ಮಿಣಿ ಅಂತ.ನಾನು ರಾಧೆ,ವಿಕ್ಕಿ ಕೃಷ್ಣ,ಸಾಹಿತ್ಯ ರುಕ್ಮಿಣಿ ಅಂತ.ಅಲ್ಲ ದೂರ ಮಾಡಿದ್ದು ಯಾರು ಅವರಿಗೆ ಹೇಗೆ ಮನಸ್ಸು ಬಂತು, ಆಯ್ತು ಈಗ ಎಲ್ಲಿದ್ದಾಳೆ ಎಂದು ತರುಣ್ ಹೇಳಿದ.ಆರು ತಿಂಗಳು ಇದ್ದಿದ್ರೆ ಎಂಗೇಜ್ಮೆಂಟ್ ಆಗ್ತಿತ್ತು ಬಟ್ ಶೀ ಇಸ್ ನೋ ಮೋರ್ ವಿತ್ ಅಸ್.ಅವಳಿಗೆ ಒಂದು ಗುಣ ಪಡಿಸಲಾಗದಂತ ಕಾಯಿಲೆ ಇತ್ತು.ಮತ್ತೆ ಅದ್ರು ಬಗ್ಗೆ ನೆನಪಿಸಿಕೊಳ್ಳಕ್ಕೆ ಇಷ್ಟ ಇಲ್ಲ ಎಂದು ಕಣ್ಣಿನಲ್ಲಿ ನಿರುಗಟ್ಟಿದವು.ನೀನು ಅವನಿಗೆ ಮೂವ್ ಅನ್ ಆಗೋಕೆ ಹೇಳಲ್ವ ಎಂದ ಅಖಿಲ್. ಹ್ಮ್ ಹೇಳಿದ್ದೆ, ಸ್ಟಾರ್ಟಿಂಗ್ ತುಂಬಾ ಸಫರ್ ಮಾಡಿದ. ಬಟ್ ನೌವ್ ಹೀ ಹೀಸ್ ಇನ್ ಹಿಸ್ ಓನ್ ಝೋನ್.ಕಂಪ್ಲೀಟ್ಲಿ ಅಡಿಕ್ಟೆಡ್ ಟೂ ಸಾಹಿತ್ಯ.ಸಾಹಿತ್ಯ ಓದ್ತಾ ಅವಳ ನೆನಪಲ್ಲೇ ಜೀವಿಸುತ್ತಾಯಿದಾನೆ.ಪೂಚಂತೇ,ಭೈರಪ್ಪ,ರವಿ ಬೆಳಗೆರೆ, ವಸುಧೇಂದ್ರ,ಗಣೇಶಯ್ಯ,ಜೋಗಿ,ಕಾರಂತರು ಹೀಗೆ ಹಲವಾರು ಸಾಹಿತಿಗಳ ಪ್ರಭಾವ.ಒಮ್ಮೆಮ್ಮೆ ಅವನು ಓದೋ ಪುಸ್ತಕದ ಗಾತ್ರ ನೋಡಿದ್ರೆ ಭಯ ಉಟ್ಟಿಸುತ್ತದೆ. ಕಥೆ, ಕಾದಂಬರಿ, ಪ್ರಬಂಧ,ಲೇಖನ,ಅಧ್ಯಾತ್ಮ ಹೀಗೆ.

ಮತ್ತೆ ಮುಂದೆ ಮದುವೆ ಬಗ್ಗೆ ಏನ್ ಹೇಳ್ತಾನೆ ಎಂದಾಗ. ನಾನು ಹೇಳಿದ್ದೆ ಮದುವೆ ಮಾಡ್ಕೋ ಎಲ್ಲ ಸರಿ ಹೋಗುತ್ತೆ ಅಂತ ಆದ್ರೆ ಕೋಪ ಮಾಡ್ಕೊಂಡು ನನಗೆ ನನ್ ಸಾಹಿತ್ಯ ಇದಾಳೆ ಸಾಕು ಯಾರು ಬೇಡ ಅನ್ನೋನು ಅಪ್ಪ ಅಮ್ಮ ಒಂದ್ಸಲ ಒತ್ತಾಯ ಮಾಡಿದ್ದಕ್ಕೆ,ನಿಮ್ಗೆ

ನಾನು ನಿಮ್ ಜೊತೆ ಇರೋದು ಕಷ್ಟ ಆದ್ರೆ ಹೇಳಿ ಸನ್ಯಾಸಿ ಆಗ್ತೀನಿ ಮತ್ತೆ ನಿಮ್ಗೆ ತೊಂದ್ರೆ ಕೊಡಲ್ಲ ಅಂತ ಜೋರಾಗಿ ಕೂಗಾಡಿದ ಅವಾಗಿಂದ ಯಾರು ಏನು ಹೇಳಲ್ಲ ಅವನಿಗೆ.

ಯಪ್ಪಾ ಸೀರಿಯಸ್ಲಿ ವಿಕ್ಕಿ ಯೂ ಆರ್ ದೀ ಲೆಜೆಂಡ್ ಮ್ಯಾನ್ ಎಂದು ತರುಣ್ ಹೇಳಿದ.

ಇಬ್ಬರಿಗೂ ಒಂದ್ ರಿಕ್ವೆಸ್ಟ್ ಮತ್ತೆ ಅವನ್ ಹತ್ರ ಏನು ಕೇಳ್ಬೇಡಿ. ಅವ್ನು ಕಂಪ್ಲೀಟ್ ರಿಕವರಿ ಆಗ್ಲಿ ಅಂತ ನಾನೇ ಇಲ್ಲ ಸೇರಿಸ್ಕೊಂಡೆ.

ಸರಿ ಸ್ಮಿತಾ ಇನ್ನು ಏನು ಕೇಳಲ್ಲ. ಬಟ್ ಒನ್ ತಿಂಗ್ ವಿಕ್ಕಿ ಬಗ್ಗೆ ನಿನ್ನ ಅಭಿಪ್ರಾಯ, ಸಪೋಸ್ ಇಫ್ ಹಿ ಪ್ರಪೋಸ್ ಮೀನ್ಸ್ ವಿಲ್ ಯೂ ಅಗ್ರಿ ಇಸ್ ಪ್ರಪೋಸಲ್ ಎಂದು ಅಖಿಲ್ ಕೇಳಿದ್ದಕ್ಕೆ. ನಾನು ಅವನಿಗೋಸ್ಕರ ಏನ್ ಮಾಡೋಕು ರೆಡಿ. ನನಗೆ ಅವನ್ ಖುಶಿ ಮುಖ್ಯ ಅಷ್ಟೇ. ಆಮೇಲೆ ನೀವು ಹೋಗಿ ಅವನ್ ಹತ್ರ ನನ್ ಬಗ್ಗೆ ಆಗ್ಲಿ ನಮ್ ಫ್ಯೂಚರ್ ಬಗ್ಗೆ ಏನು ಕೇಳ್ಬೇಡಿ ಎಂದಳು.ಇಲ್ಲ ಏನು ಕೇಳಲ್ಲ ಎಂದರು.ಗುಡ್ ಬಾಯ್ಸ್ ಎಂದು ಹೊರಡಲು ನಿಂತಾಗ,ಅಖಿಲ್ ಸ್ಮಿತಾಗೆ ಹೌ ಇಸ್ ಅವರ್ ಜೂನಿಯರ್ ಅಂಡ್ ವಾಟ್ ವಿಲ್ ಯೂ ಸೇ ಅಬೌಟ್ ಹರ್ ಎಂದು ಕೇಳಿದಾಗ.ಬೇಡ ಮಚ್ಚಾ ಜೂನಿಯರ್ ಸಹವಾಸ ಎಂದ ತರುಣ್.

ಎಸ್ ಬಿಟ್ಟರು ಬಿಡದು ಪ್ರೀತಿಯ ಮಾಯೇ ಎಂದಳು ಸ್ಮಿತಾ.

(ಸ್ಮಿತಾ ಎದ್ದು ಇಬ್ಬರಿಗೂ ಕೈ ಕುಲುಕಿ ತನ್ನ ಕ್ಯಾಬಿನ್ ಕಡೆಗೆ ಹೊರಟಳು. ತರುಣ್ ಮತ್ತು ಅಖಿಲ್ ದಮ್ಮ್ ಹೊಡೆಯಲು ಸ್ಮೋಕಿಂಗ್ ಝೋನ್ ಕಡೆಗೆ ಹೊರಟರು)

ಹೌದು ಪ್ರೀತಿಯೇ ಹಾಗೆ ಯಾರನ್ನು ಬಿಡುವುದಿಲ್ಲ. ಪರಿಶುದ್ಧ ಪ್ರೀತಿ ಆದ್ರೆ ಬಿಟ್ಟರು ಬಿಡದು ಪ್ರೀತಿಯ ಮಾಯೇ.

ಎಲ್ಲರಲ್ಲೂ ಒಬ್ಬ ವಿಕ್ಕಿ ಸಾಹಿತ್ಯ ಇರ್ತಾರೆ. ಅವರನ್ನ ಆಗಾಗ ಆಚೆ ಬರಲು ಬಿಡಿ.ಆದ್ರೆ ಜೋಪಾನ ಯಾಕಂದ್ರೆ ಬಿಟ್ಟರು ಬಿಡದು ಪ್ರೀತಿಯ ಮಾಯೇ.

ooo



# ಆಲಸ್ಯ ಯಾರಿಗಿಲ್ಲ ಹೇಳಿ?



ಸಿಂಧು ಭಾರ್ಗವ

ನಮ್ಮ ನಡುವೆ ಕೆಲವರು ಮಾತ್ರ ಶಿಸ್ತಿನ ಜೀವನ ನಡೆಸುತ್ತ ಇರುತ್ತಾರೆ. ಅದು ಕೂಡ ಟೈಮ್ ಟೇಬಲ್ ಹಾಕಿಕೊಂಡು ದಿನಚರಿ ನಡೆಸುವವರಿದ್ದಾರೆ. "ಹೀಗೆ ಆಗಬೇಕು ಎಂದು ತಾಕೀತು ಮಾಡುವವರಿದ್ದಾರೆ ಇಲ್ಲದಿದ್ದರೆ ಗುಟುರು ಹಾಕುವವರಿದ್ದಾರೆ. ಮಿಲಟರಿ ಮಾವ, ಹಿಟ್ಲರ್ ತಂದೆ ಎಂದೆಲ್ಲ ಕರೆಸಿಕೊಂಡವರಿದ್ದಾರೆ. ಆದರೆ "ಆಲಸ್ಯ" ಯಾರಿಗಿಲ್ಲ ಹೇಳಿ? "ಹೋಗಮ್ಮಾ.. ಆಮೇಲೆ ಮಾಡುತ್ತೇನೆ", " ಇನ್ನೂ ಸಮಯವಿದೆ, ನಾಳೆ ಮಾಡಿದರಾಯ್ತು," ಈಗಲೇ ಏನು ಅರ್ಜೆಂಟು, ನಾನು ಕೆಲಸ ಮಾಡುತ್ತೇನೆ ಪದೇ ಒದೇ ಹೇಳಿ ತಲೆಮೇಲೆ ಕುಳಿತುಕೊಳ್ಳಬೇಡಾ", ಅಥವಾ "ಇನ್ನೂ ಕೊಂಚ ಮಲಗುತ್ತೇನೆ" ಎಂದು ಬೆಳಗ್ಗೆ ಎಂಟರ ತನಕ ಹೊದ್ದುಕೊಂಡು ಮಲಗುವುದು ಒಂದೇ ಎರಡೇ.. ಆಸಲ್ಯವು ಪ್ರಯತ್ನವನ್ನು ಹಾಕಲು ಅಥವಾ ಮಾಡುವ ಚಟುವಟಿಕೆಗಳು, ಹೊಣೆಗಾರಿಕೆಗಳಲ್ಲಿ ತೊಡಗಲು ಇಚ್ಛೆ ಇಲ್ಲದಿರುವುದರ ಫಲವಾಗಿದೆ. ಆದರೂ ಇದನ್ನೆಲ್ಲ ಮಾಡಲು ಸಾಮರ್ಥ್ಯವಿರುವುದು. ಇದು ಸಾಮಾನ್ಯವಾಗಿ ಪ್ರೇರಣೆ, ಆಸಕ್ತಿ, ಅಥವಾ ಇಚ್ಛಾಶಕ್ತಿಯ ಕೊರತೆಯಿಂದ ಉಂಟಾಗುತ್ತದೆ.

ಆಲಸ್ಯವು ವಿವಿಧ ರೂಪಗಳಲ್ಲಿ ವ್ಯಕ್ತವಾಗಬಹುದು, ಉದಾಹರಣೆಗೆ ಮುಂದೂಡುವುದು, ದೈಹಿಕ ಅಥವಾ ಮಾನಸಿಕ ಶ್ರಮವನ್ನು ತಪ್ಪಿಸುವುದು, ಅಥವಾ ಕೆಲಸ ಮಾಡುವ ಬದಲಿಗೆ ಆರಾಮವಾಗಿರಲು ಆದ್ಯತೆ ನೀಡುವುದು. ಸಾಮಾನ್ಯವಾಗಿ, ಈ ಆಲಸ್ಯ ಸಹಜವೇ. ಇದು ಕೆಲವು ಸಂದರ್ಭದಲ್ಲಿ ವಿಶ್ರಾಂತಿಗೆ ಅಗತ್ಯವಿರುವ ಸಂಕೇತವೂ ಆಗಿರಬಹುದು. ಆದರೆ ದೀರ್ಘಕಾಲೀನ ಆಲಸ್ಯವು ವಿಫಲತೆಯ ಭಯ, ಅಥವಾ ಸ್ಥಿರ ಮನೋಭಾವದಂತಹ ಆಳವಾದ ಸಮಸ್ಯೆಗಳಿಗೆ ಸೂಚನೆ ಇರಬಹುದು.

ಆಲಸ್ಯದ ಪ್ರಕಾರಗಳು :

ಗೊಂದಲ : ಯಾವಾಗಲೂ ಗೊಂದಲ. ಏನು ಮಾಡಬೇಕೆಂಬುದೇ ಗೊಂದಲ. ಅವರಿವರ ನೋಡಿ ಹೋಲಿಕೆ ಮಾಡುವುದು. ಅವರಿವರ ಯಶಸ್ಸು ನೋಡಿ ತಾನು ಅದನ್ನೇ ಮಾಡಲು ಮುಂದಡಿಯಿಡುವುದು. ಆದರೆ ಅರ್ಧಕ್ಕೆ ನಿಲ್ಲಿಸುವುದು. ಹೀಗಿರುವಾಗ ಕೊಂಚ ಯೋಚಿಸಿ. ನಿಮ್ಮ ಗುರಿ, ನಿಮ್ಮ ಯೋಜನೆ ನಿಮಗೆ ಅತೀ ಮುಖ್ಯವಾಗುತ್ತದೆ. ಯಾವುದಾದರು ಒಂದಕ್ಕೆ ಪ್ರಾಮುಖ್ಯತೆ ನೀಡಿ. ಸತತ ಪ್ರಯತ್ನ ಮಾಡಿರಿ. ಮೊದಲು ಒಂದು ಹೆಜ್ಜೆ ಮುಂದಿಡಿ.

ಭಯ : ಭಯ ಪಡುವುದು. ತಾನು ಮಾಡುವ ಕೆಲಸ ಯಶಸ್ವಿಯಾಗದಿದ್ದರೆ? ನಷ್ಟವಾದರೆ? ಅವಮಾನ ಎದುರಿಸಬೇಕಾಗಿ ಬಂದರೆ? ಯಾರ ಬೆಂಬಲವೂ ದೊರಕದೇ ಹೋದರೆ? ಅಬ್ಬಬ್ಬಾ ನೂರಾರು ಪ್ರಶ್ನೆಗಳು ತಮಗೆ ತಾವೇ ಹಾಕಿಕೊಳ್ಳುವುದು. ಇದು ಭಯವನ್ನು ಸೂಚಿಸುತ್ತದೆ. ಆತ್ಮವಿಶ್ವಾಸದ ಕೊರತೆ. ಬದಲಾಗಿ ಧೈರ್ಯದಿಂದಿರಿ. ಸಣ್ಣ ಮಟ್ಟಿನಲ್ಲಿ ಕೆಲಸ ಪ್ರಾರಂಭಿಸಿರಿ. ಲಾಭ ನಷ್ಟದ ಬಗ್ಗೆ ಚಿಂತಿಸದಿರಿ.

ಸ್ಥಿರ ಮನೋಭಾವ : ಏನಾದರೂ ಆಗಲಿ. ನಾನು ಇಷ್ಟೇ ಮಾಡುವುದು ಎಂಬ ಭಾವನೆ. ಬೇಡವೇ ಬೇಡ. ನಿಮಗೂ ಸಾಮರ್ಥ್ಯವಿದೆ. ಮೊದಲೇ ಹೇಳಿದಂತೆ. ಸಣ್ಣ ಹೆಜ್ಜೆ ಇಟ್ಟ ಮೇಲೆ ಒಂದಷ್ಟು ಅನುಭವವಾದ ಮೇಲೆ ವೇಗವನ್ನು ಹೆಚ್ಚಿಸಿಕೊಳ್ಳಬಹುದು ತಾನೆ. ಬದಲಾಗಿ ಇಷ್ಟೇ ಸಾಕು ಎಂಬ ಸ್ಥಿರಭಾವ ನಿಂತಲ್ಲೇ ನಿಲುವುದು ಸರಿಯಲ್ಲ. ಹೊಸ ಹೊಸ ಪ್ರಯೋಗವನ್ನು ಮಾಡಬಹುದು.

ದಣಿವು : ದೈಹಿಕ ಅಥವಾ ಮಾನಸಿಕ ಸುಸ್ತು. ಎಷ್ಟು ಮಾಡಿದರೂ ಏನೂ ಪ್ರಯೋಜನವಿಲ್ಲ ಎಂಬ ಭಾವ. ಪದೆ ಪದೇ ಕಾಡುವ ಕೆಲವು ಆರೋಗ್ಯ ಸಮಸ್ಯೆಗಳು ನಮ್ಮ ಕೆಲಸವನ್ನು ಸ್ಥಗಿತಗೊಳಿಸುತ್ತದೆ. ಅದಕ್ಕೆ ಮಾನಸಿಕವಾಗಿ ದೈಹಿಕವಾಗಿ ಗಟ್ಟಿಯಾಗಿರಿ. ಯೋಗ ವ್ಯಾಯಾಮ ಆಹಾರಕ್ರಮದಲ್ಲಿ ಎಚ್ಚರಿಕೆ, ಆರೊಗ್ಯ ಕಾಪಾಡಿಕೊಳ್ಳುವುದು ಅತೀಮುಖ್ಯ.

ಆಸಕ್ತಿಯ ಕೊರತೆ: ನಮ್ಮಲ್ಲಿ "ಆರಂಭಶೂರರು" ಎಂಬ ಮಾತೊಂದಿದೆ. ಆರಂಭದಲ್ಲಿ ಇರುವ ಉತ್ಸಾಹ ನಂತರದಲ್ಲಿ ಮಾಯವಾಗುತ್ತದೆ. ಅವರನ್ನು ನಂಬಿ ಕೆಲಸ ಶುರುಮಾಡಿದರೆ ಕೊನೆಗೆ ನೀವೇ ಮುಂದುವರಿಸಬೇಕಾಗುತ್ತದೆ. ಆ ವ್ಯಕ್ತಿ ಮಾಯವಾಗಿರುತ್ತಾರೆ. ಅದು ಆಲಸ್ಯ /ಉಢಾಫೆಯ ಲಕ್ಷಣವಾಗಿದೆ. ಹವ್ಯಾಸಗಳಿಗೆ ನಿರಾಸಕ್ತಿ ತೋರಿಸುವುದು, ತಡವಾಗಿ ಏಳುವುದು, ಕಾಲ ಹರಣ ಮಾಡುವುದು, ಹೇಳಿದ ಕೆಲಸವನ್ನು ಮುಂದೂಡುವುದು. ಅತಿಯಾದ ಹಣದ ಲೆಕ್ಕಾಚಾರ. ಹಾಗಾಗಿ ಬದ್ಧತೆ, ಸ್ಥಿರತೆ ಅತೀ ಮುಖ್ಯ.

ಪಶ್ಚಾತ್ತಾಪ : ಕೆಲವು ತಪ್ಪು ನಿರ್ಧಾರಗಳ ತೆಗೆದುಕೊಂಡು ಹಿತೈಷಿಗಳ ಮಾತನ್ನು ಕೇಳದೆ ಮಾಡಿದ ಕೆಲಸಗಳಿಂದ, ಅನುಭವ ಕೊರತೆಯಿಂದ ಅಪಮಾನ, ಹಣಕಾಸಿನ ನಷ್ಟವಾಗಿ ಸಮಯವು ಹಾಳಾಗಿ ಒತ್ತಡಕ್ಕೆ ಒಳಗಾಗುವುದಿದೆ. ನಂತರ ಆತ್ಮಾವಲೋಕನ ನಡೆಸಿ ಪಶ್ಚಾತ್ತಾಪಡುವುದು.

ಸ್ವಭಾವ (ಅಥವಾ ಐಡೆಂಟಿಟಿ) : ಆಲಸ್ಯ ಕೆಲವರ ಹುಟ್ಟು ಸ್ವಭಾವ. ನಮ್ಮಲ್ಲಿ ಸೋಮಾರಿ, ಕೆಲಸ ಕಳ್ಳ ಎಂದು ಕರೆಯುತ್ತಾರೆ. ಎಲ್ಲರ ಜೊತೆ ಸೇರಿ ಏನೋ ನಾಲ್ಕು ಕೆಲಸಮಾಡಬಹುದು. ಆದರೆ ಒಬ್ಬನೇ ಮಾಡು ಎಂದರೆ ಆಲಸ್ಯ. ಸಮಯ ತಳ್ಳುವುದು. ಸಂಪೂರ್ಣ ಆಸಕ್ತಿ ತೋರಿಸಿ ಹೀಗೆಯೇ ಆಗಬೇಕು ಎಂಬ ಪರಿಪೂರ್ಣತೆ ಬಗ್ಗೆ ಯಾವ ಆಸಕ್ತಿಯೂ ಇಲ್ಲದಿರುವುದು.

ಇಷ್ಟೇ ಅಲ್ಲಾ ಇನ್ನು ಕೆಲವು ನಿಮ್ಮೊಳಗೂ ಇರಬಹುದು :

ಇದು ವ್ಯಕ್ತಿತ್ವ, ಮನೋಭಾವ ಅಥವಾ ಹೊರಗಿನ ಪರಿಸ್ಥಿತಿಗಳಿಂದ ಪ್ರಭಾವಿತವಾಗಿರುತ್ತದೆ. ಇಲ್ಲಿವೆ ಆಲಸ್ಯದ ಕೆಲವು ವಿಧಗಳು:

ಮಾನಸಿಕ ಆಲಸ್ಯ : ಯೋಜನೆ, ಸಮಸ್ಯೆಗಳನ್ನು ಪರಿಹರಿಸುವುದು ಅಥವಾ ಕಲಿಕೆಯಂತಹ ಚಟುವಟಿಕೆಯಲ್ಲಿ ತೊಡಗಲು ಇಚ್ಛೆ ಇಲ್ಲದಿರುವುದು. ಉದಾಹರಣೆಗೆ ಕೆಲವು ಕಟುಸಮಸ್ಯೆಗಳನ್ನು ಒಪ್ಪದ ಮನಸ್ಸು, ಹೊಸ ಜ್ಞಾನವನ್ನು ಪಡೆಯಲು ಇಚ್ಛೆಪಡದಿರುವುದು, ಅಥವಾ ಇತರರ ಅಭಿಪ್ರಾಯಗಳಿಗೆ ಅವಲಂಬಿತರಾಗಿರುವುದು.

ಭಾವನಾತ್ಮಕ ಆಲಸ್ಯ : ಭಾವನಾತ್ಮಕ ಶ್ರಮ ಅಥವಾ ಒಬ್ಬರ ಭಾವನೆಗಳು ಅಥವಾ ಸಂಬಂಧಗಳ ಜೊತೆ ಬದುಕಲು ಉತ್ಸಾಹವಿಲ್ಲದಿರುವುದು. ಸಂಘರ್ಷಗಳನ್ನು ಕಡೆಗಣಿಸುವುದು, ವೈಯಕ್ತಿಕ ಬೆಳವಣಿಗೆಯನ್ನು ಗಮನಿಸದಿರುವುದು, ಅಥವಾ ಭಾವನಾತ್ಮಕವಾಗಿ ಲಭ್ಯವಿಲ್ಲದಿರುವುದು. ಸಂಗಾತಿಯು ಏನೋ ವಿಷಯಕ್ಕೆ ಜಗಳ ತೆಗೆಯುತ್ತಿದ್ದಾಳೆ ಎಂದರೆ ಕಿವಿಗೊಟ್ಟು ಕೇಳದೆ ಉಢಾಫೆ ಮಾಡುವುದು. ಅಥವಾ ಸ್ನೇಹಿತರ ಭಾವನೆಗಳಿಗೆ ಬೆಲೆ ಕೊಡದಿರುವುದು. ಮಾತನ್ನು ಆಲಿಸದಿರುವುದು, ಮೊಬೈಲ್ ನೋಡುತ್ತಲೋ ಬೇರೆಡೆ ದೃಷ್ಟಿ ಹಾಯಿಸುತ್ತ ಮಾತನ್ನು ನಿರ್ಲಕ್ಷ್ಯ ಮಾಡುವುದು.ಅಥವಾ ವಾಗ್ವಾದ ನಡೆಯುವ ಸ್ಥಳದಿಂದ ಹೊರನಡೆದು ಆ ಸಮಸ್ಯೆಗೆ ಪರಿಹಾರವೋ ನಿರ್ಣಯವನ್ನು ಕೈಗೊಳ್ಳಲು ಮುಂದಾಗದೇ ಇರುವುದು.

ಆರಾಮಪ್ರಿಯ ಆಲಸ್ಯ : ಕಷ್ಟ ಪಟ್ಟು ಕೆಲಸ ಮಾಡುವ ಬದಲು ಪ್ರಯತ್ನ ಹಾಕುವ ಬದಲು ಅಥವಾ ಬದಲಾವಣೆಯ ಬದಲಿಗೆ ಆರಾಮವನ್ನು ಆಯ್ಕೆಮಾಡುವುದು. ಇಷ್ಟವಿಲ್ಲದ ತೃಪ್ತಿಕರವಾಗದ ಕೆಲಸದಲ್ಲಿ ಸಿಲುಕಿರುವುದು ಅಥವಾ ಬೆಳವಣಿಗೆಗೆ ಬೇಕಾಗುವ ಸವಾಲುಗಳಿಂದ ತಪ್ಪಿಸುವುದು. ಸಾಕು ಬಿಡು ಎಂಬ ಭಾವ.

ಅವಕಾಶಪ್ರಿಯ ಆಲಸ್ಯ : ಹೊಣೆಗಾರಿಕೆಯನ್ನು ತಪ್ಪಿಸಲು ಅಥವಾ ಕೆಲಸವನ್ನು ಇತರರಿಗೆ ಹೊರೆಸಲು ಹವಣಿಸುವುದು. ನಿರಂತರವಾಗಿ ಸಹಾಯವನ್ನು ಕೇಳುವುದು ಅಥವಾ ತಂಡದ ಕೆಲಸವನ್ನು ಇತರರ ಮೇಲೆ ಬಿಟ್ಟುಕೊಡುವುದು.

ಸೃಜನಾತ್ಮಕ ಆಲಸ್ಯ : ಈಗಿನ ಕಾಲದಲ್ಲಿ ಶ್ರಮವನ್ನು ತಪ್ಪಿಸಲು ಶಾರ್ಟ್‌ಕಟ್‌ಗಳು ಅಥವಾ ಸೃಜನಾತ್ಮಕ ವಿಧಾನಗಳನ್ನು ಬಳಸುವುದು, ಆದರೂ ಬೇಕಾದ ಫಲಿತಾಂಶವನ್ನು ಸಾಧಿಸುವುದು. ಮತ್ತೆ ಮತ್ತೆ ಮಾಡುವ ಕೆಲಸಗಳನ್ನು ಸ್ವಯಂಚಾಲಿತಗೊಳಿಸುವುದು ಅಥವಾ ಕೆಲಸವನ್ನು ಕಡಿಮೆಗೊಳಿಸಲು ತಂತ್ರಗಳನ್ನು ಹುಡುಕುವುದು. ಇದರಿಂದ ಒಂದಷ್ಟು ಯಂತ್ರಗಳು , ಆಪ್ಲಿಕೇಶನ್ ಗಳು ಹುಟ್ಟಿಕೊಂಡಿವೆ ಎನ್ನಿ. ಒಳ್ಳೆಯದೂ ಆಗಿದೆ.

ಪ್ರತಿ ರೀತಿಯ ಆಲಸ್ಯಕ್ಕೂ ತನ್ನದೇ ಆದ ಕಾರಣಗಳು ಮತ್ತು ಪರಿಹಾರಗಳು ಇವೆ, ಮತ್ತು ಅವುಗಳನ್ನು ಜಯಿಸಲು ಸ್ವಜ್ಞಾನದ ಜೊತೆಗೆ ಪ್ರಮುಖವಾದ ತಂತ್ರಗಳ ಅಗತ್ಯವಿದೆ. ೦೦೦

# ಪ್ರಕೃತಿಯ ಮಡಿಲು



ರಮ್ಯ ಕೃಷ್ಣಪ್ರಭು

ಪ್ರಕೃತಿಯ ಮಡಿಲಲಿ
ಹಚ್ಚಹಸಿರಿನ ವನಸಿರಿಯಲಿ
ಬೆಟ್ಟ-ಗುಡ್ಡಗಳು ತಂಪಲಿ
ಹಕ್ಕಿಗಳ ಕಲರವದಲಿ

ಜುಳು ಜುಳು ಹರಿದು
ಜಲಪಾತದ ನಾದದಲಿ
ಸಂತಸವು ಭೋರ್ಗರೆದು
ಧುಮ್ಮಿಕ್ಕಿ ಮನದಲಿ

ಹೂಗಳ ಮೇಲೆ ಕುಳಿತು
ದುಂಬಿಯು ಖುಷಿಯಲಿ
ಗುಂಯ್ ಗುಂಯೆಂದು ಹಾಡುತಲಿ
ಹೃನ್ಮನವ ತಣಿಸುತಲಿ

ಪದಗಳೇ ಸಿಗದು
ಬಣ್ಣನೆಗೆ ನಿಲುಕದು
ತಂಪಿನ ಮಡಿಲಿದು
ಹಿಂತಿರುಗಲು ಮನಸ್ಸಾಗದು

ooo

# ಕಾಣದ ಕಡಲು ಎಷ್ಟು ದೂರವಿದ್ದರೇನು?



ಮಂಜುಶ್ರೀ ಮುರಳೀಧರ್.

ಕಾಣದ ಕಡಲು ಎಷ್ಟು ದೂರವಿದ್ದರೇನು?
ಬಾಳ ದೋಣಿಗೆ ನೀ ಹುಟ್ಟುಗೋಲಾಗಿರಲು.
ಸಮುದ್ರ ಮಧ್ಯೆ ಎಷ್ಟೇ ಅಲೆಗಳು ಇದ್ದರೇನು?
ದಡ ಸೇರಿಸುವ ಸಮರ್ಥ ನಾವಿಕ ನೀ ಇರಲು.
ನಿನ್ನ ಪ್ರೀತಿಯ ಬಲೆಗೆ ಸೆರೆಸಿಕ್ಕ ಮೀನು ನಾ,
ನೀನಿದ್ದರೆ ಜೊತೆಯಲ್ಲಿ ಬಂಧನವು ನಂದನವೇ.
ಸುಡುವ ಬಿಸಿಲು, ರಭಸದ ಗಾಳಿ, ಮಳೆಯ ಹನಿ
ಅನುಗಾಲವು ಕಷ್ಟವೆನಿಸದು ಈ ಜೀವಕ್ಕೆ
ನಿನ್ನ ಹೃದಯದ ಚಿಪ್ಪಿನೊಳಗಿನ ಮಣಿಯಾಗಿರಲು.
ಕಾಣದ ಕಡಲು ಎಷ್ಟು ದೂರವಿದ್ದರೇನು?

OOO



# ಕಂಬಳಿ ಹುಳುವಿನ ಸ್ವಗತ



ಮಮತಾ ಶೃಂಗೇರಿ

ಎಲ್ಲರೂ ನನ್ನನ್ನು ನೋಡಿದರೆ ಭಯ ಬೀಳುತ್ತಾರೆ. ಮುಟ್ಟಿದರೆ ಚುಚ್ಚುವ ಭಯ ಅವರನ್ನು ಕಾಡುತ್ತದೆ, ಮೈತುಂಬ ಮುಳ್ಳು ತುಂಬಿರುವ, ಮೃದು ದೇಹದ ನನ್ನನ್ನು ಕಂಡರೆ ಎತ್ತಿ ಎಸೆಯುವುದು, ಬಡಿದು ಬಿಸಾಡುವುದು ಹೆಚ್ಚಿನವರ ಜಾಯಮಾನ.



ಅಪರೂಪಕ್ಕೊಮ್ಮೆ ನಾನು ಕಪ್ಪು ಬಣ್ಣವನ್ನು ಬಿಟ್ಟು, ಬಣ್ಣ ಬಣ್ಣದ ಕಂಬಳಿಯನ್ನು ಧರಿಸಿ ಬರುತ್ತೇನೆ. ಆದರೂ ನಾನು ಯಾರಿಗಾದರೂ ಸ್ವಲ್ಪ ತಗುಲಿದರೂ ಸಾಕು, ತಾಳಲಾರದು ತುರಿಕೆ ಉರಿ. ಕೂದಲ ಹಾಕಿ ಉಜ್ಜಿ, ಅರಿಶಿಣ ಹಾಕಿ ತೀಡಿದರೂ ಕಡಿಮೆಯಾಗದು ಎನ್ನುವ ದೂರು ಇವರೆಲ್ಲರದು. ಅದಕ್ಕೆ ದೇವರಲ್ಲಿ ದೂರಿದಾಗ ದೇವರು ನೀಡಿದ ಮಾಯ ಕನ್ನಡಿ ಇದು. ನಾಳೆಯ ಭವಿಷ್ಯ ಇಲ್ಲಿ ಇದೆಯಂತೆ.

ಅದಕ್ಕಾಗಿಯೇ ನಾನಿಂದು ಬಂದು ಕನ್ನಡಿಯ ಮುಂದೆ ನಿಂತಿರುವೆ. ಆದರೆ i ದೇವರು ನನ್ನನ್ನು ಈಗ ಹೀಗೆಯೇ ಇಟ್ಟಿರುವನು. ಮೈಯೆಲ್ಲಾ ಚುಚ್ಚುವ ಮುಳ್ಳಿರುವ ಕ್ಷುಲ್ಲಕ ಕೀಟ, ಕಂಬಳಿ ಹುಳುವಾಗಿ. ಇಂದಿನ ಈ ಎಲ್ಲಾ ತಿರಸ್ಕಾರ, ಅಪಮಾನ, ಅವಹೇಳನ ನನ್ನ ಸುಂದರ ನಾಳೆಗಳಿಗೆ ಮೆಟ್ಟಿಲಾಗಿ ಪರಿವರ್ತಿಸುತ್ತಾನೆ ಎನ್ನುವ ನಂಬಿಕೆ ನನಗಿದೆ.

ಇದರ ಮೂಲಕ ನನ್ನ ಭವಿಷ್ಯದ ಅರಿವು ನನಗಿದೆ. ಯಾರೂ ನನ್ನನ್ನು ಹೊಸಕಿ ಹಾಕಲು ಬಿಡದಂತೆ, ನನ್ನಿಂದ ಯಾರಿಗೂ ತೊಂದರೆಯಾಗದಂತೆ ಒಮ್ಮೆ ಸ್ವಲ್ಪ ಕಾಲ ಬದುಕಿ ಬಿಟ್ಟರೆ, ನಂತರ ಎಲ್ಲರೂ ಮೆಚ್ಚಿ ಹಿಡಿಯ ಬಯಸುವ ಪತಂಗ ನಾನಾಗಿ ಹಾರಬಲ್ಲೆ. ಆದರೆ ಆಗ ನಾನು ಯಾರ ಕೈಗೂ ಸಿಕ್ಕುವುದಿಲ್ಲ.ಸುಂದರ ರೂಪ, ಹಾರುವ ಆತ್ಮವಿಶ್ವಾಸ ನನಗೆ. ಜಗತ್ತಿನ ಸುಂದರಿಯರೆನಿಸಿದ ಪುಷ್ಪಗಳ ಸಹವಾಸ, ಮಧುಹೀರುವ ಅವಕಾಶ ಎಲ್ಲವೂ ದೊರೆಯುತ್ತದೆ.

ಆದರೆ ಆ ದಿನಗಳು ಎದುರಾಗಲು ಈ ದಿನಗಳು ಇವೆಲ್ಲವನ್ನೂ ಅನುಭವಿಸುವುದು ಅನಿವಾರ್ಯ. ಯಾರು ಬೇಕಾದರೂ ನನ್ನನ್ನು ಬಕಾಸುರನೆಂದು ಜರಿದು, ಕುರೂಪಿ ಎಂದು ದೂರಿದರೂ ಬೇಸರವಿಲ್ಲ. ನಾಳೆ ಬರುವ ಒಳ್ಳೆಯ ದಿನಕ್ಕಾಗಿ ಇಂದು ಎಲ್ಲವನ್ನು ಸಹಿಸುವ ಶಕ್ತಿಯನ್ನು ನೀಡಿರುವ ದೇವರಿಗೆ ನಮಿಸಿ ನನ್ನ ಕೆಲಸದಲ್ಲಿ ನಾನು ಶ್ರದ್ಧೆಯಿಂದಲೇ ತೊಡಗಿಕೊಳ್ಳುವೆ.

ಯಾರೇನು ಹೇಳುವರೆಂಬ ಚಿಂತೆ ನನಗಿಲ್ಲ, ಸುಂದರ ನಾಳೆಗಳು ನನಗಾಗಿ ಇದೆ ಎನ್ನುವ ದೂರ ದೃಷ್ಟಿ ಒಂದೇ ನನಗೆ ಸಾಕು.

(ನಾವೂ ಹೀಗೆ ಕಷ್ಟ ಬಂದಾಗ ಕಂಬಳಿ ಹುಳುವಿನಂತೆ ಯೋಚಿಸಿ, ಸುಂದರ ನಾಳೆಗಳನ್ನು ಕಟ್ಟಿಕೊಳ್ಳುವತ್ತ ಗಮನ ನೀಡೋಣ)

OOO



# ವಿಸ್ಮಯ



ಸತೀಶ್ ಬಿಳಿಯೂರು

ನಭದೆಲ್ಲೆಡೆ ಚುಕ್ಕಿಗಳ ತನನ
ಹಲವಾರೂ ಗ್ರಹಗಳ ಸಮ್ಮಿಲನ
ಮೆಲ್ಲ ಮೆಲ್ಲನೆ ಚಂದಿರನ ಆಗಮನ
ಹೊತ್ತು ಕಳೆದಂತೆ ಮುಗಿಯಿತು ಯಾನ

ಹುಣ್ಣಿಮೆ ಚಂದಿರ ಬಾನಿಗೆ ಬಟ್ಟಲು
ಹಾಲ್ಬೆಳಕಲಿ ತೂಗುವ ತೊಟ್ಟಿಲು
ಬೆಂಕಿ ಕಾರುವ ಧ್ರುವನಕ್ಷತ್ರಗಳ ಸಾಲು
ಉಲ್ಕೆಪಾತಗಳು ಅತ್ತಿತ್ತ ಸುಳಿಯಲು

ಇರುಳು ನಭ ಬಲೂ ವಿಸ್ಮಯದ ತಾಣ
ಕಣ್ಣಿಗೆ ಗೋಚರಿಸುವುದು ಚುಕ್ಕಿಗಳ ಬಾಣ
ದೊಡ್ಡ ತಾರೆಗಳ ನಡುವೆ ಪುಟ್ಟ ತಾರೆ
ಬಾನಿನೆಲ್ಲೆಡೆ ಮಿಂಚುತ ನಗುತಿರೆ

ಎಲ್ಲೆಡೆ ಕಣ್ಣು ಹಾಯಿಸುತ ನೋಡಿದರೆ
ಎಷ್ಟೋ ವಿಚಿತ್ರ ಬಾನಲ್ಲಿ ಕಾಣುತಿರೆ
ಇದೆಲ್ಲ ಕಣ್ಣಿಗೆ ಕೌತುಕದ ಗೂಡು
ಈ ಬ್ರಹ್ಮಾಂಡವೆ ವಿಸ್ಮಯ ನೋಡು

ooo

# ಯುಗಾದಿ



ಸುವರ್ಣ ಭಟ್ಟ

ಹೊಸ ವರ್ಷದ ಆರಂಭವೇ ಯುಗಾದಿ. ಮರಗಿಡಗಳು ಚಿಗುರುವುದರ ಜೊತೆಗೆ ಕೋಗಿಲೆಯ ಗಾನ ಕೇಳುವ ವಸಂತ ಋತುವಿನ ಆಗಮನ.



ಅಂದಿನ ಯುಗಾದಿ

'ಯುಗಾದಿ' ವರ್ಷದ ಆರಂಭದ ಹಬ್ಬ . ಅಂದು ಜಾಸ್ತಿ ಇರುತ್ತಿದ್ದಿದ್ದು 'ಅವಿಭಕ್ತ' ಕುಟುಂಬವಾಗಿತ್ತು. ದೂರದಲ್ಲಿದ್ದ ಅಣ್ಣ ತಮ್ಮಂದಿರು ಹಬ್ಬದ ಹಿಂದಿನ ದಿನ ಮೂಲ ಮನೆಗೆ ಬಂದು ಹಬ್ಬದ ವಾತಾವರಣ ಸೃಷ್ಟಿಸುತ್ತಿದ್ದರು. ಮನೆಯ ಮುಂದೆ ಹೆಂಗಸರೆಲ್ಲರೂ ಸೇರಿ ಸಗಣಿಯಿಂದ ಅಂಗಳ ಸಾರಿಸಿ ಒಪ್ಪವಾಗಿಡುತ್ತಿದ್ದರು. ಹಬ್ಬದ ದಿನ ಮನೆಯಲ್ಲಿ ಹೆಣ್ಣು ಮಕ್ಕಳೆಲ್ಲ ಬೇಗ ಎದ್ದು ಸ್ನಾನ ಮಾಡಿ ಹೊಸ ಬಟ್ಟೆ ಧರಿಸುತ್ತಿದ್ದರು. ಹೊಸ ಬಟ್ಟೆಯೆಂದರೆ ಮನೆ ಮನೆಗೆ ಬಟ್ಟೆ ಮಾರುವವರು ಬಂದರೆ ಹೊಸ ಬಟ್ಟೆಯ ಖರೀದಿಯಾಗುತ್ತಿತ್ತು ಇಲ್ಲವಾದರೆ ಅಮ್ಮನ ಹೊಸ ಸೀರೆ ಹೆಣ್ಣು ಮಕ್ಕಳಿಗೆ ಲಂಗ ದಾವಣಿಯಾಗುವುದರ ಜೊತೆಗೆ ಹಬ್ಬದ ಮಡಿ ಬಟ್ಟೆ ಎಂದು ಹೆಸರು ಪಡೆಯುತ್ತಿತ್ತು. ಅಕ್ಕ ತಂಗಿಯರದೆಲ್ಲ ಒಂದೇ ಬಣ್ಣದ ಬಟ್ಟೆಯಾಗಿರುವುದರಿಂದ ಜಗಳಗಳಾಗುತ್ತಿರಲಿಲ್ಲ.

ಹಬ್ಬದ ದಿನ ಮನೆ ಮುಂದೆ ಗುಡಿಸಿ ಒರೆಸಿ ಮಾಡಿ ಅಂಗಳದಿ ರಂಗೋಲಿ ಹಾಕಲು ರಂಗೋಲಿ ಪುಡಿಯ ಜೊತೆಗೆ ಒಂದೆರಡು ಬಣ್ಣದ ಪುಡಿಗಳು ಜೊತೆಗಿರುತ್ತಿದ್ದವು. ಎಲ್ಲ ಹೆಣ್ಮಕ್ಕಳು ಜೊತೆಗೂಡಿ ಅಂತು ರಂಗೋಲಿ ಬಿಡಿಸಿ ಮುಗಿಸುತ್ತಿದ್ದರು. ಎಲ್ಲರ ತಿಂಡಿ ಮುಗಿದ ನಂತರ

(ಸಾಮಾನ್ಯವಾಗಿ ಅಂದು ಲಘು ಉಪಹಾರ ಅಂದರೆ ಅವಲಕ್ಕಿ ಸೇವನೆ ಅಷ್ಟೇ ಇರುತ್ತಿತ್ತು). "ಮಾವಿನೆಲೆಯ ಗಂಡು ಮಕ್ಕಳು ಕಟ್ಟಿ ನಂತರ ಅದನ್ನು ಬಾಗಿಲಗೆ ತೋರಣವಾಗಿ ಸಿಕ್ಕಿಸುತ್ತಿದ್ದರು. ವಸಂತಮಾಸವೆಂದರೆ ಹಸಿರುಗಳ ಸಂಭ್ರಮ ಹಾಗಾಗಿ ಫಲ ಬಂದ ಮಾವಿನ ಕಾಯಿಗಳು, ಬೇವಿನೆಲೆಗಳು ತೋರಣದಲ್ಲಿರುತ್ತಿದ್ದವು. ಮಲ್ಲಿಗೆ, ಜಾಜಿ ಹೂಗಳು ಮಾಲೆಯಾಗಿ ದೇವರ ಮುಡಿ ಏರಲು ಸಜ್ಜಾಗಿರುತ್ತಿದ್ದವು. ದೇವರಿಗೆ ತುಪ್ಪದಾರತಿಗೆ ತಯಾರಿ ಮಾಡಿ ದೇವರ ಮುಂದೆ ಪಂಚಾಗವಿಡಲು ಆ ಜಾಗದ ಸುತ್ತಲು ಚಿಕ್ಕದೊಂದು ರಂಗೋಲಿ ಹಾಕಿ ಅದರ ಮೇಲೆ ಮಣೆಯಿಟ್ಟು ನಂತರ ಪಂಚಾಂಗವಿಡುತ್ತಿದ್ದರು".

ಮನೆಯ ಹೆಂಗಸರು ಮಡಿಸೀರೆಯುಟ್ಟು ಅಡುಗೆ ಮಾಡಿ, ಹೋಳಿಗೆ ಮಾಡಲು ತಯಾರಿ ಮಾಡಿಕೊಳ್ಳುತ್ತಿದ್ದರು. ಮನೆಯ ಹಿರಿಯರು ಸ್ನಾನಮಾಡಿ ಬಂದು ದೇವರಿಗೆ ಪೂಜೆಮಾಡಿ ಪಂಚಾಂಗ ಪೂಜೆ ಮಾಡಿ, ಮಾಡಿರುವ ಹಬ್ಬದಡುಗೆಯ ನೈವೇದ್ಯಮಾಡಿ, ಆರತಿ ಬೆಳಗಿ ಪಂಚಾಂಗ ಓದುತ್ತಿದ್ದರು. ಯುಗಾದಿ ಪುರುಷ ಯಾವ ಮುಖನಾಗಿ ಹೊರಟ ಮತ್ತು ಏನೇನು ಹಿಡಿದು ಹೊರಟನೆಂದು ಓದಿ ಹೇಳ ಅವುಗಳ ಬೆಲೆ ಈ ವರ್ಷ ಜಾಸ್ತಿಯಾಗುತ್ತದೆ ಎನ್ನುತ್ತಿದ್ದರು.

ಉಳಿದವರು ದೇವರ ಕೋಣೆಯಲ್ಲಿ ಕುಳಿತು ಅವರು ಓದಿ ಹೇಳುವುದ ಗಮನವಿಟ್ಟು ಆಲಿಸುತ್ತಿದ್ದರು. ಬೇವಿನ ಸೊಪ್ಪನ್ನು ತುಪ್ಪದಲ್ಲಿ ಹುರಿದು ಪುಡಿ ಮಾಡಿ ಅದಿಕ್ಕೆ ಸ್ವಲ್ಪ ಬೆಲ್ಲ ಹಾಕಿ ಮಿಶ್ರಣಮಾಡಿ ಮನೆಯ ಹಿರಿಯರೊಬ್ಬರು ಎಲ್ಲರ ಕೈಯಲ್ಲು ಇಟ್ಟು ಇದನ್ನು ತಿನ್ನಿ ಮಕ್ಕಳೆ ಸಿಹಿ ಕಹಿಯ ಜೀವನದಲ್ಲಿ ಸಮಾನವಾಗಿ ಸ್ವೀಕರಿಸಿ ಜೀವನದಲ್ಲಿ ಮುಂದೆ ಬನ್ನಿ ಎನ್ನುತ್ತಿದ್ದರು. ಬೇವು ಬೆಲ್ಲ ತಿಂದು ಹಿರಿಯರ ಆಶೀರ್ವಾದ ಪಡೆಯುತ್ತಿದ್ದರು ಮಕ್ಕಳು ಕೊನೆಗೆ ಮನೆಯ ತೋಟದಲ್ಲೆ ಬೆಳೆದಿರುವ ಬಾಳೆಗಳ ಹಾಕಿ ಅದರ ಮೇಲೆ ಬಿಸಿ ಬಿಸಿ ಅಡುಗೆ ಬಡಿಸಿ, ಹೋಳಿಗೆ ತುಪ್ಪವ ಹಾಕಿ ಮೊದಲು ಮನೆಯ ಹಿರಿಯರು ಮಕ್ಕಳು ಗಂಡಸರಿಗೆ ಬಡಿಸಿ ಕೊನೆಯಲ್ಲಿ ಹೆಣ್ಮಕ್ಕಳು ಊಟ ಮಾಡುತ್ತಿದ್ದರು.

ಊಟದ ನಂತರ ಎಲ್ಲರೂ ಒಟ್ಟಾಗಿ ಕುಳಿತು ಮನೆಯಲ್ಲಿ ಬೆಳೆದ ಹಣ್ಣುಗಳ ತಿಂದು, ಎಲೆ ಅಡಿಕೆ ಮೆಲ್ಲುತ್ತಾ ಮಾತನಾಡುತ್ತಾ ಕೂರುತ್ತಿದ್ದರು. ಸಂಜೆಯ ಸಮಯವಾಗುತ್ತಿದ್ದಂತೆ ಉಳಿದ ಹೋಳಿಗೆಯ ತಟ್ಟಿ ಮುಗಿಸುತ್ತಿದ್ದರು ಆ ಮನೆಯ ಹೆಣ್ಮಕ್ಕಳು. ಹೀಗೆ ಖುಷಿಯಿಂದ ಎಲ್ಲ ಸೇರಿ ಹಬ್ಬ ಆಚರಿಸುತ್ತಿದ್ದರು.

ಇಂದಿನ ಯುಗಾದಿ

ಇಂದಿನ ದಿನಗಳಲ್ಲಿ ಆರತಿಗೊಬ್ಬ ಮಗ ಕೀರುತಿಗೊಬ್ಬ ಮಗಳು ಎನ್ನುವಂತೆ 'ವಿಭಕ್ತ 'ಕುಟುಂಬಗಳೇ ಅಧಿಕವಾಗಿರುವುದು. ದೂರದಲ್ಲಿದ್ದರು ಹಬ್ಬದ ಸಮಯದಿ ಮನೆಗೆ ಬರುತ್ತಿದ್ದ ಮಗ ಮದಯವೆಯ ನಂತರ ತಾನು ಎಲ್ಲಿರುವನೋ ಅಲ್ಲೆ ಹಬ್ಬ ಮಾಡಲು ಆರಂಭಿಸಿದ.

ದೂರದ ಹಳ್ಳಿಗೆ ಹೆಂಡತಿ , ಚಿಕ್ಕ ಮಕ್ಕಳ ಕರೆದುಕೊಂಡು ಹೋಗುವ ಬದಲು ಅವರ ಆರೋಗ್ಯ ದೃಷ್ಟಿಯಿಂದ ಎಲ್ಲಿರುವರೊ ಅಲ್ಲೆ ಹಬ್ಬ ಆಚರಿಸುವರು.

ಹಬ್ಬಕ್ಕೆ ಅಂತ ಬಟ್ಟೆ ಕೊಳ್ಳುವವರಿಗಿಂತ ತೇರು, ಜಾತ್ರೆ ಎಂದು ಅಲ್ಲಿಯೇ ಬಟ್ಟೆ ಖರೀದಿ ಆಗಿರುತ್ತದೆ. ಬಟ್ಟೆಗಳ ಇಡಲು ಜಾಗವಿಲ್ಲದ್ದಷ್ಟು ಬಟ್ಟೆ ಮನೆಯಲ್ಲಿರುತ್ತದೆ. ಹಬ್ಬಕ್ಕೆ ಅಂತಲೆ ಬಟ್ಟೆ ಕೊಳ್ಳುವವರು ಕಡಿಮೆ. ಹಳ್ಳಿಗಳಲ್ಲಿ ಸಾಮಾನ್ಯವಾಗಿ ವೃದ್ಧರೆ ಜಾಸ್ತಿ. ಅವರಾದರು ಒಬ್ಬರು ಇಬ್ಬರು ಏನಂತ ಹಬ್ಬ ಆಚರಿಸಲು ಸಾಧ್ಯ. ತಮ್ಮ ಕೈಲಾದಂತೆ ಮಾಡಿಕೊಂಡು ಮುನ್ನಡೆಯುವರು.

ಬ್ಯುಸಿ ಜಗತ್ತಿನಲ್ಲಿ ಕೆಲಸದ ಮುಂದೆ ಹಬ್ಬಗಳ ಆಚರಣೆ ಮೊದಲಿನಂತಿಲ್ಲ. ದೂರದೂರಿನಿಂದ ಹಬ್ಬಕ್ಕೆಂದು ಮನೆಗೆ ಬಂದರು ಲ್ಯಾಪ್ ಟಾಪ್ ಹಿಡಿದು ಕೂರುವ ಮಕ್ಕಳಿರುವಾಗ ತಂದೆ ತಾಯಿಗೆ ಅವರಿಂದ ಸಹಾಯವಾಗುವ ಬದಲು ಅವರೇ ಮಕ್ಕಳಿಗೆ ಅಡುಗೆ ಮಾಡಿ ಬಡಿಸಬೇಕು.

ಕೆಲವರಂತು ದೂರದಲ್ಲಿದ್ದುಕೊಂಡೆ ಹಬ್ಬದ ಶುಭಾಶಯಗಳ ತಿಳಿಸುವರು.

ooo



# ಮೊಬೈಲ್ ಎಂಬ ಮಾಯೆ ಆವರಿಸಿದಾಗ



ವಾಣಿ ಶಿವಕುಮಾರ್

ಎಲ್ಲಾ ವಯೋಮಾನದವರ ಹತ್ತಿರವೂ ಮೊಬೈಲ್ ಇರುತ್ತದೆ. "ಮನಸುಗಳು ಸರಿ ಇಲ್ಲದಿರೋ ಮನೆ ಸಿಗಬಹುದು ಆದರೆ ಮೊಬೈಲ್ ಇಲ್ಲದಿರೋ ಮನೆಗಳು ಬೂತ ಗಾಜಿನಿಂದ ಹುಡುಕಿದರೂ ಸಿಗುವುದಿಲ್ಲ"



ಲಾಕ್ಡೌನ್ ಮುಂಚೆ ಮನೆಯ ಹಿರಿಯರ ಕೈಯಲ್ಲಿ ಅರ್ತಾಥ್ ಅಪ್ಪ ಅಮ್ಮ, ಅಜ್ಜಿ ತಾತ ಇಂತಹವರ(ದೊಡ್ಡವರ) ಹತ್ತಿರ ಮಾತ್ರ ಮೊಬೈಲ್ ಇರುತ್ತಿತ್ತು ಅಂತೆಯೇ, ಮಕ್ಕಳು ಸಹ ಆಟ, ಪಾಠ, ಓದು, ಬರಹ ಅಮ್ಮನಿಗೆ ಮನೆಗೆಲಸದಲ್ಲಿ ಸಹಾಯ ಮಾಡುವುದು ಹೀಗೆ ತಮ್ಮನ್ನು ತಾವು ತೊಡಗಿಸಿಕೊಂಡು ದಿನಪೂರ್ತಿ ಉತ್ಸಾಹದಿಂದಿರುತ್ತಿದ್ದರು. ಕೊರೊನಾ ಎಂಬ ವೈರಸ್ ಇಡೀ ದೇಶವನ್ನೇ, ಪ್ರಪಂಚವನ್ನೇ ತಲ್ಲಣ ಗೊಳಸಿತು ನೋಡು ನೋಡುತ್ತಿದ್ದಂತೆಯೇ ಎಲ್ಲಾ ವಹಿವಾಟುಗಳು, ಶಾಲಾ ಕಾಲೇಜುಗಳು, ಆಫೀಸ್ಗಳು ಸ್ಥಗಿತಗೊಂಡವು..

ಒಂದು ಸಾಮಾನ್ಯ ನೆಗಡಿ, ಕೆಮ್ಮು ಬಂದರೆ ಮುಗೀತು ಅವರ ಕಥೆ, ಏನೋ ಮಾರಣಾಂತಿಕ ಖಾಯಿಲೆ ಬಂದುಬಿಟ್ಟಿದೆಯೇನೋ ಅನ್ನೋ ತರಹ ಬಿಂಬಿಸಿಬಿಟ್ರು ಅಂತೆಯೇ ಎಷ್ಟೋ ಮಂದಿ ಜೀವವನ್ನು ಕಳೆದುಕೊಂಡರು. ಆ ಸಮಯದಲ್ಲಿ ಶಾಲಾ-ಕಾಲೇಜುಗಳಲ್ಲಿ ಮಕ್ಕಳಿಗೆ ಆನ್ಲೈನ್ ಕ್ಲಾಸ್ ಪ್ರಾರಂಭವಾಯಿತು ಆಗಿನಿಂದ ಶುರುವಾಯಿತು ನೋಡಿ ಮೊಬೈಲ್ ಚಟ. ಬರೀ ತರಗತಿ ಸಮಯಕ್ಕೆ ಸೀಮಿತವಾಗಿದ್ದಿದ್ದರೆ ಮಕ್ಕಳಿಂದು ಮೊಬೈಲ್ ಚಟಕ್ಕೆ ಬಿದ್ದು ದಾರಿ ತಪ್ಪುತ್ತಿರಲಿಲ್ಲ ಅನಿವಾರ್ಯ ಕಾರಣದಿಂದ ಮೊಬೈಲ್ ಕೊಡಲೇ ಬೇಕಾಗುವಂತಹ ಸಂದರ್ಭ ಒದಗಿ ಬಂತು..

ಈ ಆನ್ಲೈನ್ ಎಂಬುದು ತರಗತಿಗೆ ಮಾತ್ರ ಮೀಸಲಾಗಿರಲಿಲ್ಲ ವಿದೇಶದಲ್ಲಿರುವ ಮಗ ತನ್ನ ತಂದೆಯ ಕಾರ್ಯವನ್ನು ಆನ್ಲೈನ್ ಮೂಲಕ ಮಾಡುವಂತಹ ಪರಿಸ್ಥಿತಿ ನಿರ್ಮಾಣವಾಯಿತು ಯಾವುದೋ ಒಂದು ಊರಲ್ಲಿ ಪುರೋಹಿತರು ಮಂತ್ರ ಹೇಳುವುದು ಇಲ್ಲಿ ಅಪ್ಪ-ಅಮ್ಮ ಅದನ್ನು ಫಾಲೋ ಮಾಡುತ್ತಾ ತಮ್ಮ ಮಗನಿಗೆ ಎಳೆಯನ್ನು ಹಾಕುವುದು ಈ ರೀತಿ ಎಲ್ಲಾ ಪರಿಸ್ಥಿತಿ ನಿರ್ಮಾಣವಾಗಿ ಬಿಟ್ಟಿತ್ತು ಆದರೆ ಈಗ, ಎಂದಿನಂತೆ ತರಗತಿಗಳು ಆಫೀಸು ಕಛೇರಿಗಳೆಲ್ಲ ಪುನರಾರಂಭಿಸಿದೆ ಆದರೆ ಮೊಬೈಲ್ಗೆ ದಾಸವಾಗಿರುವ ಮಕ್ಕಳು ಮಾತ್ರ ಈ ಚಟವನ್ನು ಇಂದಿಗೂ ಬಿಟ್ಟಿಲ್ಲ ನೋಡಿ..

ಅಪ್ಪ-ಅಮ್ಮ ನಮ್ಮನ್ನೂ ಸಹ ಮದುವೆ ಉಪನಯನ ಇನ್ನಿತರ ಸಭೆ ಸಮಾರಂಭಗಳಿಗೆ ಕರೆದುಕೊಂಡು ಹೋಗುತ್ತಿದ್ದರು ಆಗ ಎಲ್ಲರೂ ಒಟ್ಟಿಗೆ ಬೆರೆತು ಪರಸ್ಪರ ಪರಿಚಯ ಮಾಡಿಕೊಂಡು ಮಾತನಾಡಿ ಊಟ ಮಾಡಿಕೊಂಡು ಬರುತ್ತಿದ್ದೆವು. ಆದರೆ ಈಗ ಯಾರಿಗಾದರೂ ನಮ್ಮ ಮಕ್ಕಳನ್ನು ಪರಿಚಯಿಸಬೇಕೆಂದರೆ ಅವನು ಅಥವಾ ಅವಳು ಎಲ್ಲಿದ್ದಾರೆ ಎಂದು ಫೋನ್ ಮಾಡಿ ನಾವಿದ್ದ ಜಾಗಕ್ಕೆ ಬರಹೇಳಬೇಕಾದಂತಹ ಪರಿಸ್ಥಿತಿ ನಿರ್ಮಾಣವಾಗಿದೆ..

ಒಂದು ಚಿಕ್ಕ ಮಗುವಿಗೆ ಊಟ ಮಾಡಿಸಲು ಮೊಬೈಲ್ ಬೇಕೇ ಬೇಕು ಅದು ಇಲ್ಲದಿದ್ದರೆ ಇಂದು ಯಾವ ಮಕ್ಕಳು ಊಟವೇ ಮಾಡುವುದಿಲ್ಲ.. ಚಂದಮಾಮನನ್ನು ತೋರಿಸಿ ಬೆಳದಿಂಗಳಲ್ಲಿ ಊಟ ಮಾಡಿಸುವ ಆ ಅನುಭವ ಎಷ್ಟೋ ತಾಯಂದಿರಿಗೆ ಇಂದು ಸಿಕ್ಕಿಲ್ಲ ಯೂಟ್ಯೂಬ್ ನಲ್ಲಿ ಹಾಡು ಹಾಕಿ ಕೊಟ್ಟು ಊಟ ಮಾಡಿಸುವುದು ಮಾಮೂಲಿ ಆಗೋಗಿದೆ ಈಗಿನ ಕಾಲದ ಮಕ್ಕಳೂ ಸಹ ಆಟ ಆಡುತ್ತಾರೆ ಯಾವ ಆಟ ಅಂತ ಕೇಳ್ತೀರಾ?ಇರಿ, ಹೇಳ್ತೇನಿ...!!ಅದೇ ಮೊಬೈಲ್ ನಲ್ಲಿ ಡೌನ್ಲೋಡ್ ಮಾಡ್ಕೊಂಡಿರ್ತಾರಲ್ಲ ಫ್ರೀ ಫೈಯರ್, ಟೆಂಪಲ್ ರನ್ ಅದೆಂತದೋ ಸರ್ಫ್ ಹಾ! ಈಗ ನೆನಪಾಯ್ತು ನೋಡಿ ಅದೇ ಸಬ್ ವೇ ಸರ್ಫ್.. ಕ್ರಿಕೆಟ್, ಲಗೋರಿ, ಶೆಟಲ್ ಕಾಕ್ ಅದೆಲ್ಲ ಆಡುವ ಮಕ್ಕಳು ಕಾಣಸಿಗುವುದು ಕಡಿಮೆಯಾಗಿದೆ..

ಮೊನ್ನೆ ನನ್ನ ಸ್ನೇಹಿತನ ಮಗನ ಹುಟ್ಟುಹಬ್ಬಕ್ಕೆ (1st year) ಹೋಗಿದ್ದೆ ನನ್ನ ಎದುರು ಸಾಲಿನಲ್ಲಿ ಕೂತಿದ್ದ ಮಹಿಳೆ ತನ್ನ ಮಗನ ಕೈಯಲ್ಲಿ ಫೋನ್ ಕೊಟ್ಟು ತನ್ನಷ್ಟಕ್ಕೆ ತಾನು ಊಟ ಮಾಡುತ್ತಿದ್ದಾಳೆ. ಆ ಮಗು ಎಲ್ಲಾ ಪದಾರ್ಥಗಳನ್ನು ಹಾಕಿಸಿಕೊಂಡು ಫೋನ್ ನೋಡುತ್ತಲೇ ತಿನ್ನಲಾ ರಂಭಿಸಿತು, ಎಷ್ಟು ಆಟದಲ್ಲಿ ಮುಳುಗಿದ್ದ ಅನ್ನೋದಕ್ಕೆ ಹೇಳ್ತೀನಿ ಕೇಳಿ.

ನೀರು ಕುಡಿಯುವಾಗ ಕೈ ತಪ್ಪಿ ತಿನ್ನುತ್ತಿರುವ ಅನ್ನದ ಮೇಲೆ ಚೆಲ್ಲಿತು ಆ ಹುಡುಗ ಅದನ್ನೇ ಕಲಸಿಕೊಂಡು ತಿನ್ನುತ್ತಿದ್ದಾನೆ ಎಲೆಯಿಂದ ನೀರು ಹರಿದು ಕೆಳಗಡೆ ಬೀಳುತ್ತಿದ್ದರೂ

ಅಮ್ಮನಾಗಲಿ ಆ ಮಗುವಿಗಾಗಲಿ ಅರಿವಾಗಲಿಲ್ಲ ಇದು ಆಶ್ಚರ್ಯ ಎನಿಸಿದರು ಕಣ್ಣಾರೆ ಕಂಡಂತಹ ಕಟು ಸತ್ಯ..

ಊಟಕ್ಕೆ ಮೊದಲು ಶ್ಲೋಕವನ್ನು ಹೇಳಿಸಿ ಅನ್ನದ ಮಹತ್ವವನ್ನು ತಿಳಿಸುತ್ತಿದ್ದ ಕಾಲವಿತ್ತು ಆದರೆ ಈಗ ಮೊಬೈಲ್ ಜೊತೆ ಊಟ ಮಾಡುವ ಅದೆಷ್ಟೋ ಮಕ್ಕಳು, ದೊಡ್ಡವರನ್ನು ನೋಡಬಹುದು ಇದನ್ನು ಓದುತ್ತಿರುವವರ ಮನಸ್ಸಿನಲ್ಲಿ ಇವರೇನು ಮೊಬೈಲನ್ನು ಬಳಸುವುದೇ ಇಲ್ಲವ ಎಂಬ ಪ್ರಶ್ನೆ ಮೂಡಬಹುದು?? ಹೌದು! ಖಂಡಿತವಾಗಿಯೂ ಉಪಯೋಗಿಸುತ್ತೇನೆ ನನ್ನ ಕವನ, ಕವಿತೆ,ಆರ್ಟಿಕಲ್ಸ್ ಅಪ್ಲೋಡ್ ಮಾಡುವ ಸಲುವಾಗಿ, ಮಕ್ಕಳ ಸ್ಕೂಲ್, ಕಾಲೇಜ್ ಗ್ರೂಪ್ ನೋಡುವ ಸಲುವಾಗಿ ಉಪಯೋಗಿಸುತ್ತೇನೆ..

ನಮ್ಮ ಆತ್ಮೀಯರಿಗೆ,ಸ್ನೇಹಿತರಿಗೆ ಒಡಹುಟ್ಟಿದವರಿಗೆ,ಅಪ್ಪ ಅಮ್ಮನಿಗೆ ವಿವಾಹದ ಶುಭಾಶಯ ಅಥವಾ ಹುಟ್ಟು ಹಬ್ಬದ ಶುಭಾಶಯದ ಸಂದರ್ಭದಲ್ಲಿ ಮೆಸೇಜ್ ಮಾಡಿ ಎರಡು ಸ್ಮೈಲಿ ಎಮೋಜಿ ಜೊತೆ ಒಂದು ಕೇಕ್ ಎರಡು ಬೊಕ್ಕೆ ಕೊಟ್ಟರೆ ಶುಭಾಶಯ ಮುಗಿದಂತೆ ಫೋನ್ ಮಾಡಿ ಉಭಯ ಕುಶಲೋಪರಿ ಮಾತನಾಡಿ ಮನಸಾರೆ ಹಾರೈಸುವ ಜೀವಗಳು ಕಡಿಮೆಯೇ ಇದು ನೋವಿನ ಸಂಗತಿಯಾದರೂ ಸತ್ಯವೇ ಅಲ್ಲವೇ....? ಮುಂಬರುವ ದಿನಗಳಲ್ಲಿ ಇದಕ್ಕಿಂತಲೂ ಚಟ ಜಾಸ್ತಿ ಆಗಬಹುದು ಇಲ್ಲವೇ ಆರೋಗ್ಯಕರ ದೃಷ್ಟಿಯಿಂದ ಗಣನೀಯವಾಗಿ ಕಡಿಮೆಯಾಗಬಹುದು..

ಗರ್ಭಾವಸ್ಥೆಯಲ್ಲಿ ನಮ್ಮ ಅಜ್ಜಿ ಅಮ್ಮ ನಮಗೆ ರಾಮಾಯಣ, ಮಹಾಭಾರತ,ಶ್ಲೋಕಗಳು,ಮನಸ್ಸಿಗೆ ಖುಷಿಯಾಗುವಂತಹ ವಿಷಯಗಳನ್ನು ಹೇಳುತ್ತಿದ್ದರು ಆರೋಗ್ಯಕರವಾದ, ರುಚಿಯಾದ ಅಡುಗೆಗಳನ್ನು ಮಾಡಿ ಬಡಿಸುತ್ತಿದ್ದರು ಆದರೆ ಈಗ, ತುದಿ ಬೆರಳಲ್ಲಿಯೇ ಸ್ವಿಗ್ಗಿ,ಝೊಮ್ಯಾಟೊಗಳಿವೆ ಬೇಕಾದನ್ನು ತರಿಸಿಕೊಂಡು ತಿಂದು ಸಮಯ ಕಳೆಯುತ್ತಾರೆ ಹಾಗಂತ ಎಲ್ಲರೂ ಹೀಗೆ ಇರುವುದಿಲ್ಲ ಪರಿಸ್ಥಿತಿಗನುಗುಣವಾಗಿ ಕೆಲವರು ಹೀಗಿರುತ್ತಾರಷ್ಟೆ.

ಬಸ್ಸು ರೈಲು ಎಲ್ಲೇ ಸಾರ್ವಜನಿಕ ಸ್ಥಳಗಳಲ್ಲಿ ಗಮನಿಸಿ. ಅಪ್ಪ–ಅಮ್ಮ ಮಕ್ಕಳು ಎಲ್ಲರ ಕೈಯಲ್ಲೂ ಫೋನು ಆದಷ್ಟು ಹಿರಿಯರು ಮಕ್ಕಳ ಕೈಯಲ್ಲಿ ಫೋನನ್ನು ಕೊಡದೆ ಮನೆಯಿಂದ ಹೊರಗಡೆ ಆಡಲು ಕಳುಹಿಸಿದರೆ ನಮ್ಮ ಮಣ್ಣಿನ ಸೊಗಡಿನ ಘಮ ಆಸ್ವಾದಿಸುವ ಜೊತೆಗೆ ಒಳ್ಳೆಯ ವ್ಯಾಯಾಮವೂ ಆಗಿ ದೇಹ ಸದೃಢವಾಗಿರುತ್ತದೆ...

ooo

# ಶ್ರೀಗಂಧದ ಹಾಗೆ



ನಾಗೇಶ್ ಮೈಸೂರು

ಗಂಧವಾದರೆ ಚಂದ, ಪಸರಿಸುತ ಶ್ರೀಗಂಧ
ಪೂಸಿಕೊಳಬಹುದು ತನುವ ಗುಡಿಯ ಮಾಡಿ
ಬಿಂದುವಾದರು ಸರಿಯೆ, ತಿಲಕವದು ಹಣೆಯಲಿರೆ
ಘಾಸಿಯಾಗದದು ತೊಗಲ ನೆರಿಗೆ ತೀಡಿ ॥

ಬಂಧದಿಂದಲೆ ಬಾಳು, ಬಂಧನವೆ ಹುರಿಗಾಳು
ಕುಂದಾಗದದರ ರುಚಿಯು ಜಗಿದು ತಾಳು
ನಂದದಿರಲದು ಕೇಳು, ನಿಂದಿಸದೆ ನಡೆದೇಳು
ಒಂದಾಗಿಸಲದೆ ಜರಡಿ ಸೋಸಿ ಧೂಳು ॥

ಅಂಥ ಬಂಧಕೆ ಬೇಕು, ಕಲೆ ಕಾವ್ಯ ಬರಹಗಳು
ಚೇತನವ ಬಡಿದೆಬ್ಬಿಸೆ ಮನದ ಸರಕು
ಸಂತ ಸಾಲದು ಕಾಡೆ, ನವ ದೃಷ್ಟಿ ನಾವೆಯೊಳು
ನೂತನದ ನೋಟವದಿರೆ ತೇಪೆ ಬಿರುಕು ॥

ಬರಹವೊಂದಿರೆ ಸಾಕೆ? ಓದೊ ರಸಿಕರಿರಬೇಕು
ಕೂಡಿಸಲು ವೇದಿಕೆಯಿರೆ ಬೆರೆವ ಕೂಟ
ಕರವದೊಂದಿರೆ ಸಾಕೆ? ಪಸರಿಸುವವರಿರಬೇಕು
ಜೋಡಿಸಲು ಕಂಕಣವನು ಕಟ್ಟೊ ದೂತ ॥

ಬೀಜವೊಂದದು ಮೊಳೆತು, ಗಿಡವೆ ಮರವಾಗುತಲದು
ರೆಂಬೆ ಕೊಂಬೆಗು ಚಾಚುತ ಪರ್ಣ ಮೂರ್ತ
ತೇಜವೊಂದಿರೆ ಚಿಗಿತು, ಹೂ ಕಾಯಿ ಹಣ್ಣಾಗುವುದು
ಅಂಬೆಯವಳಿರೆ ಪೊರೆಯಲು ಪುಣ್ಯ ತೀರ್ಥ ॥

ೲೲೲ

# ಮೆಡಿಸಿನ್ ಅಂದರೆ... ಮಾತ್ರೆಗಳಲ್ಲ



ಡಾ. ಸೌಮ್ಯ ಗುರುರಾಜ್

ಮೆಡಿಸಿನ್ ಅಂದರೆ... ಮಾತ್ರೆಗಳಲ್ಲ ಮಾತ್ರೆಗಳನ್ನ ಡ್ರಗ್ಸ್ ಅಂತೇವೆ. ಆದರೆ ಇಂದಿನ ದಿನಗಳಲ್ಲಿ ಜನಸಾ ಮಾನ್ಯರು ಅನರ್ಥ ಮಾಡಿಕೊಂಡಿರುವುದು ಬೇಸರದ ಸಂಗತಿ.

ಮೆಡಿಸಿನ್ ಅಂದರೆ, ಆಹಾರ, ವ್ಯಾಯಾಮ, ಯೋಗ, ನಮ್ಮ ಮಾನಸಿಕ ನೋವನ್ನ ಸರಿಯಾದ ವ್ಯಕ್ತಿಯೊಂದಿಗೊ ಹಂಚಿಕೊಳ್ಳುವುದು.ಮಾನಸಿಕ ಸ್ಥಿರತೆ ನಮ್ಮ ಆಹಾರದಿಂದಲೂ ಪ್ರಭಾವಬೀರುವ ಸಾಧ್ಯತೆಯಿದೆ.

*ಮಾನಸಿಕ ಆರೋಗ್ಯ*

ಮಾನಸಿಕ ಆರೋಗ್ಯವು ನಮ್ಮ ಜೀವನದ ಪ್ರತಿಯೊಂದು ನಿರ್ಣಾಯಕ ಹಂತದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಅದು ಸಮಗ್ರ ಆರೋಗ್ಯದ ಒಂದು ಭಾಗವಾಗಿದ್ದು, ದೈನಂದಿನ ಜೀವನದಲ್ಲಿ ಶಾಂತಿ, ಸಂತೋಷ ಮತ್ತು ಸಮಾಧಾನವನ್ನು ಕಾಪಾಡಲು ಸಹಾಯ ಮಾಡುತ್ತದೆ.

ಪ್ರಾಚೀನ ತತ್ತ್ವಗಳು ಮಾನಸಿಕ ಆರೋಗ್ಯವನ್ನು ಉಳಿಸಲು ಮತ್ತು ಸುಧಾರಿಸಲು ಅನೇಕ ಮಾರ್ಗಗಳನ್ನು ಒದಗಿಸುತ್ತವೆ.

ದೇಹದ, ಮನಸ್ಸಿನ ಮತ್ತು ಆತ್ಮದ ಸಮತೋಲನವನ್ನು ಅಳವಡಿಸಿಕೊಂಡು ಸಮಗ್ರ ಚಿಕಿತ್ಸೆ ಪಡೆಯಬಹುದಾಗಿದೆ.

'ಸಾತ್ವಿಕ' ಜೀವನ ಶೈಲಿ, which includes balanced diet, regular exercise, and mental hygiene, plays a important role in maintaining mental health. ಇದು ಶಾಂತಿ, ಸಮಾಧಾನ ಮತ್ತು ಒಳ್ಳೆಯ ಮನೋಭಾವಗಳನ್ನು ಉತ್ತೇಜಿಸುತ್ತದೆ.

ಪ್ರಾಣಾಯಾಮ, ಧ್ಯಾನ ಮತ್ತು ಯೋಗವು ದೇಹಕ್ಕೆ ತೊಂದರೆ ಬರದಂತೆ ಕಾಪಾಡಲು ಮುಖ್ಯವಾಗಿವೆ, ಇದು ಮಾನಸಿಕ ಶಾಂತಿಯನ್ನು ಪ್ರೇರೇಪಿಸುತ್ತದೆ. ಪ್ರಾಣಾಯಾಮವು ಶ್ವಾಸಪ್ರಶ್ವಾಸದ ನಿಯಂತ್ರಣದ ಮೂಲಕ ಮನಸ್ಸನ್ನು ಶಾಂತಗೊಳಿಸಲು ಸಹಾಯ ಮಾಡುತ್ತದೆ. ಧ್ಯಾನವು ಆಂತರಿಕ ಚಿಂತನೆ ಮತ್ತು ಮನಸ್ಸಿನ ಶಾಂತಿಗೊಳಿಸಲು ಸಹಾಯ ಮಾಡುತ್ತದೆ. ಯೋಗವು ದೈಹಿಕ ಫಿಟ್ನೆಸ್ ಮತ್ತು ಮನಸ್ಸಿನ ಶಾಂತಿಯ ಎರಡನ್ನೂ ಒದಗಿಸುತ್ತದೆ. ನಿತ್ಯವೂ ತಿಂದುಂಡು ನಂತರ ಸ್ನಾನ ಮಾಡುವುದರಿಂದ ಸಾಕಷ್ಟು ತೊಂದರೆ ದೇಹದಲ್ಲಾಗುವುದು ಹಾಗಾಗಿ ಯೋಗ ಧ್ಯಾನಗಳನ್ನು ತಿನ್ನುವ ಮೊದಲೇ ಹಾಗೂ ಸ್ನಾನಾ ನಂತರ ಮಾಡುವುದು ಒಳ್ಳೆಯದು.

ಪ್ಲಾಂಟ್ಸ್ ಮತ್ತು ಹರ್ಬ್ಸ್ ಆಧರಿಸಿದ ಆಯುರ್ವೇದ ಔಷಧಿಗಳು, ಉದಾಹರಣೆಗೆ, ಬ್ರಾಹ್ಮಿ, ಅಶ್ವಗಂಧ ಇವು ಮಾನಸಿಕ ಒತ್ತಡವನ್ನು ತಗ್ಗಿಸಲು ಮತ್ತು ಶಾಂತ ಮನಸ್ಸನ್ನು ಅಭಿವೃದ್ಧಿ ಪಡಿಸಲು ಸಹಾಯ ಮಾಡುತ್ತವೆ. ಆಯುರ್ವೇದದ ಪ್ರಕ್ರಿಯೆಯಿಂದಲೂ ಸಾಧ್ಯವಿದೆ.

ತೈಲ ಮಸಾಜು, ಅಭ್ಯಂಗ ಮತ್ತು ಶಿರೋಧಾರವು ಸಹ ಆಯುರ್ವೇದದಲ್ಲಿ ವಿಖ್ಯಾತ ನಿರ್ವಾಣ ಮಾರ್ಗಗಳು, ಇದು ದೇಹದ ಮತ್ತು ಮನಸ್ಸಿನ್ನು ಸಮತೋಲನದಲ್ಲಿ ಇಟ್ಟುಕೊಳ್ಳಲು ಸಹಾಯ ಮಾಡುತ್ತದೆ.

ಮಾನಸಿಕ ಆರೋಗ್ಯದ ಸಮತೋಲನದ ಮುಖ್ಯ ಪರಿಹಾರಕಗಳನ್ನು ಒದಗಿಸುತ್ತದೆ, ಮತ್ತು ಇದರ ನಿಯಮಿತ ಅನುಸರಣೆ ಜೀವನದ ಪ್ರತಿಯೊಂದು ಅಂಶದಲ್ಲಿ ಸಮತೋಲನವನ್ನು ತರುತ್ತದೆ. ಮಾತ್ರೆಗಳ(ಡ್ರಗ್) ಹೊರತು ಪಡಿಸಿ, ಉತ್ತಮ ಮಾರ್ಗದರ್ಶನದೊಂದಿಗೆ ಶಾಂತ ಮತ್ತು ಸಂತೋಷಕರ ಜೀವನವನ್ನು ನಡೆಸಲು ಸಾಧ್ಯ. ಹಾಗಾಗಿ ಖಾಯಿಲೆ ಬರುವ ಮೊದಲೇ ಜೀವನದಲ್ಲಿ ಬದಲಾವಣೆಯ ಕಡೆ, ಅಂದರೆ ಮೊದಲೇ ತಿಳಿಸಿದಂತೆ ಆಹಾರ , ವ್ಯಾಯಾಮ ಧ್ಯಾನ ಸರಿಯಾದ ದಿನಚರಿಯ ಪಾಲನೆ ಮಾಡುವುದರಿಂದ ಸಾಧ್ಯ.

ooo



# ಬದುಕಿನ ಹಾದಿ



ಸತೀಶ್ಚಂದ್ರ

ಎದುರು ಮನೆಯ ಮುಂದೆ ಕಾರು ಬಂದು ನಿಂತಿತು. ಕಾರಿನಿಂದ ಕೆಳಗಿಳಿದ ಭಾರತಿ ನೆಲನೋಡುತ್ತಾ ಮನೆಯೊಳಗೆ ನಡೆದಳು. ಬಂದಾಗ ಒಮ್ಮೆ ಮೊದಲು ನಮ್ಮ ಮನೆಕಡೆ ದೃಷ್ಟಿ ಹರಿಸಿ, ನಾವ್ಯಾರು ಕಾಣದಿದ್ದರೂ ಕೂಗಿ ಕರೆದು ನಗೆಬೀರಿ ಅವರ ಮನೆಯೊಳಗೆ ಹೆಜ್ಜೆ ಇಡುತ್ತಿದ್ದ ಅವಳ ಚರ್ಯೆ ಇಂದು ಬದಲಾಗಿತ್ತು.

ಪ್ರತಿಬಾರಿ ಬಂದವಳು ಅವರ ಮನೆಯಲ್ಲಿ ಅರೆಕ್ಷಣ ನಿಲ್ಲದೆ ನಮ್ಮ ಮನೆಗೆ ಬಂದು ಮನೆಯವರೆಲ್ಲರೊಂದಿಗೆ ' ಒಡಕು ಗಡಿಗೆಯಲ್ಲಿ ಹೊಕ್ಕ ನೊಣ ಗುಯ್ ಗುಟ್ಟುವಂತೆ, ತಲೆ ಚಿಟ್ಟು ಹಿಡಿಯುವ ಹಾಗೆ ಮಾತನಾಡುತ್ತಿದ್ದವಳು ಇಂದು ಬಂದು ನಾಲ್ಕಾರು ಗಂಟೆಗಳು ಕಳೆದರೂ ಅವಳ ಸುಳಿವಿರಲಿಲ್ಲ. ಅದು ಸಾಧ್ಯವೂ ಇರಲಿಲ್ಲ. ಸಂದರ್ಭವೇ ಹಾಗಿತ್ತು.

ಮರುದಿನ ನಾವೇ ಅವರ ಮನೆಗೆ ಹೋದೆವು. ಮನೆಯಲ್ಲಿ ಎಂದೂ ಇಲ್ಲದ ನೀರವ ವಾತಾವರಣ. ಭಾರತೀಯ ತಂದೆ ತಾಯಿಯರಲ್ಲಿ ನಿರುತ್ಸಾಹ ಕಾಣುತ್ತಿತ್ತು. ಮೊದಲು ನಾವು ಹೋದರೆ ಸಾಕು ಸಾಕಷ್ಟು ಹರಟೆ ಹೊಡೆಯುವವರು ಇಂದು ಕೇಳಿದ್ದಕ್ಕೆಲ್ಲಾ ಚುಟುಕು ಉತ್ತರಗಳು. ನಮ್ಮ ಮಾತುಗಳನ್ನು ಕೇಳಿದೊಡನೆಯೇ ಜಿಗಿ ಜಿಗಿದು ಬರುತ್ತಿದ್ದ ಭಾರತಿ ರೂಮಿನಿಂದ ಹೊರಬರಲೇ ಸಂಕೋಚಗೊಂಡಿದ್ದಳು. ನಾವಾಗಿಯೇ ಮಾತನಾಡಿಸಿದ್ದಕ್ಕೆ ಭಾರವಾದ ಉಸಿರಿನಿಂದ ಹೂ., ಊಹೂ ..ವಿನ ಧ್ವನಿ ಬರುತ್ತಿತ್ತು ಅಷ್ಟೆ.

**ನಾ ಅಂದು ಆಫೀಸಿನಿಂದ ಬಂದಾಗ, ಹಲವು ದಿನಗಳ ನಂತರ ಭಾರತಿ ಅವರ ಮನೆ ಗೇಟ್ ಬಳಿ ನಿಂತಿದ್ದನ್ನು ಕಂಡೆ. ಸ್ಕೂಟರ್ ನಿಲ್ಲಿಸಿ ತಿರುಗಿ ನೋಡುವಷ್ಟರಲ್ಲಿ ಅವಳು ಅಲ್ಲಿರಲಿಲ್ಲ. ಕಳೆಗುಂದಿದ ಮುಖ, ಬದಲಾದ ವೇಷಭೂಷಣ. ಇಳಿದ ಮೈಕಟ್ಟು. ಉತ್ಸಾಹಕುಂದಿದ ಭಾವ. ಅವಳನ್ನು ನೋಡಿದರೆ ಅವಳೇ ಇವಳಾ? ಅನ್ನುವಂತಹ ಬದಲಾವಣೆ. ಸದಾ ಚಿಲುಮೆಯಂತಿದ್ದು ಚಟಪಟನೆ ಅರಳು ಹುರಿದಂತೆ ಮಾತನಾಡುತ್ತಾ ಇದ್ದವಳು ಇವಳೇನಾ? ನಂಬಲಾರದಷ್ಟು ವ್ಯತ್ಯಾಸ.

ಚಿಕ್ಕಂದಿನಿಂದಲೂ ನಾವಿಬ್ಬರೂ ಆಡಿಕೊಂಡು ಬೆಳೆದವರು. ವರ್ಷಗಳುರುಳಿದಂತೆ ದೇಹದಲ್ಲಿ ಸಹಜ ಬೆಳವಣಿಗೆಯಾಗಿ ವ್ಯತ್ಯಾಸ ಕಂಡರೂ ಭಾವನೆಗಳಲ್ಲಿ ಏನೂ ಏರಿಳಿತವಿರಲಿಲ್ಲ. ಒಬ್ಬರನ್ನು ಒಬ್ಬರು ಕಿಚಾಯಿಸುವುದು, ಕಿತ್ತಾಡುವುದು, ಕೋಪಮಾಡಿಕೊಳ್ಳುವುದು ಸಾಮಾನ್ಯವಾಗಿರುತ್ತಿತ್ತು.

ನನ್ನ ಓದು ಮುಗಿದು ಕೆಲಸ ಸಿಕ್ಕಿತ್ತು. ಭಾರತಿ ಇನ್ನೂ ಕೊನೆಯ ಪದವಿಯಲ್ಲಿ ಓದುತ್ತಿದ್ದಳು. ಅದೊಂದು ದಿನ ನಮ್ಮ ಮನೆಗೆ ಬಂದಾಗ, ಯಾವುದೋ ಕಾರಣಕ್ಕೆ ನನ್ನ ಮೇಲೆ ಮುನಿಸಿಕೊಂಡು ನನ್ನಮ್ಮನಲ್ಲಿ ದೂರು ನೀಡಿದ್ದಳು. ನೀವಿನ್ನೂ ಎಳೆಯ ಮಕ್ಕಳಂತೆಯೇ ಆಡುತ್ತಿದ್ದೀರಿ, ನೀನು ನನ್ನ ಸೊಸೆಯಾಗಿ ಬಂದು ಬಿಡು. ದಿನಾ ನಿಮ್ಮ ಚೆಲ್ಲಾಟವನ್ನು ನೋಡುತ್ತಾ ನಾವೂ ಕಾಲ ಕಳೆಯುತ್ತೇವೆ ' ಎಂದು ನಸುನಗುತ್ತಾ ಅಂದಾಗಲೆ ನಮ್ಮಿಬ್ಬರ ಮನೋಭಾವ ಬೇರೆ ದಾರಿಯಲ್ಲಿ ಓಡತೊಡಗಿದ್ದು.

ಅಮ್ಮನಿಂದ ಬಂದ ಆ ಮಾತುಗಳು ನನ್ನನ್ನು ಗಂಭೀರತೆಯ ತೆಕ್ಕೆಗೆ ಹಾಕಿಕೊಂಡರೆ, ಭಾರತಿಯನ್ನು ನಾಚಿಕೆಯತ್ತ ನೂಕಿತ್ತು. ಏನೇನೋ ಕನಸುಗಳನ್ನು ಕಾಣುವಂತೆ ಮಾಡಿತ್ತು. ಇದರ ಪ್ರಸ್ತಾಪವನ್ನು ಸೂಕ್ಷ್ಮವಾಗಿ ನನ್ನ ಅಪ್ಪ ಅಮ್ಮ ಭಾರತಿಯ ಹೆತ್ತವರ ಗಮನಕ್ಕೆ ತಂದಿದ್ದರು .

ಅದೇಕೋ ಭಾರತಿಯ ಅಪ್ಪನಿಗೆ ನನ್ನ ಬಗ್ಗೆ ಅಷ್ಟು ಒಳ್ಳೆಯ ಅಭಿಪ್ರಾಯವಿರಲಿಲ್ಲ. ಅವರ ವಿಚಾರಧಾರೆ ಏನಿತ್ತೋ ಏನೋ ಗೊತ್ತಿಲ್ಲ. ನನ್ನ ಹೆತ್ತವರೂ ಮುಂದುವರೆಯಲಿಲ್ಲ, ಸುಮ್ಮನಿದ್ದರು. ಅವಳನ್ನು ಬೆಂಗಳೂರಿನ ಹುಡುಗನಿಗೆ ಕೊಟ್ಟು ಮದುವೆ ಮಾಡುವ ಪ್ರಸ್ತಾಪ ಬಂದಾಗ ನನ್ನತ್ತ ಅವಳು ಕಣ್ಣೋಟ ಬೀರಿದ್ದಳು. ಅದನ್ನು ನಾ ಅರಿಯದೆ ಹೋಗಿದ್ದೆ.

ಭಾರತಿಯ ಮದುವೆಯಲ್ಲಿ ನಾನೇ ಎಲ್ಲದಕ್ಕೂ ಓಡಾಡಿಕೊಂಡಿದ್ದರೂ ಮನಸ್ಸಿನಲ್ಲಿ ಹೇಳಲಾರದ ತಳಮಳ. ಏನನ್ನೋ ಕಳೆದುಕೊಳ್ಳುತ್ತಿರುವ ದುಗುಡ . ಗಂಡನ ಮನೆಗೆ ಅವಳು ಹೋಗುವಾಗ ಇಬ್ಬರ ಕಣ್ಣಲ್ಲೂ ದುಃಖ ಉಮ್ಮಳಿಸಿತ್ತು.

ಆಗಾಗ ತವರು ಮನೆಗೆ ಬಂದು ಹೋಗುತ್ತಿದ್ದ ಭಾರತಿ , ತನ್ನ ಅತ್ತೆ ಮಾವನಿಂದ ಸಾಕಷ್ಟು ನೊಂದು ಬೆಂದು ಹೋಗುತ್ತಿದ್ದೇನೆಂದು ತಿಳಿಸುತ್ತಿದ್ದಳು. ಗಂಡನ ಒಳ್ಳೆಯ ತನ,
ಪ್ರೀತಿ , ಸಾಂತ್ವನ ನನ್ನನ್ನು ಅಲ್ಲಿರುವಂತೆ ಮಾಡಿದೆ ಎಂದು ಹೇಳುತ್ತಿದ್ದಳು .

ವಿಧಿಬರಹ ಕೆಟ್ಟದಾಗಿದ್ದಾಗ ಯಾರೇನು ಮಾಡಲು ಸಾಧ್ಯ ? ಮದುವೆಯಾಗಿ ಎರೆಡು ವರ್ಷಗಳಾಗುವುದರ ಒಳಗೆ , ಯಾರನ್ನು ನಂಬಿ ಅಲ್ಲಿದ್ದಳೋ ಅವನೇ ಅಪಘಾತದಲ್ಲಿ ತೀರಿ

ಹೋದಾಗ ಅವಳ ಆಸೆಗಳೆಲ್ಲಾ ಮುರುಟಿ ಹೋದವು . ಭಾರತಿಗೆ ಅಲ್ಲಿರಲು ಮನಸ್ಸಿರಲಿಲ್ಲ , ಅತ್ತೆ ಮಾವಗೆ ಅದು ಬೇಕಾಗಿಯೂ ಇರಲಿಲ್ಲ .
ತವರು ಮನೆಯತ್ತ ಹೆಜ್ಜೆ ಹಾಕಿದ್ದಳು .

ಭಾರತಿ ನನ್ನನ್ನು ನೋಡಿದಷ್ಟೂ ದೂರ ಒಡತೊಡಗಿದ್ದಳು . ನಾನು ಅವಳು ಓಡಿದಷ್ಟೂ ಅವಳನ್ನು ಮುಟ್ಟಲು ಯತ್ನಿಸುತ್ತಿದ್ದೆ.

ಅವಳನ್ನು ಹಿಡಿದು ಕೇಳಿಯೇ ಬಿಟ್ಟೆ ; ಕಾರಣ ., ಅವಳು ಸವೆಸುವ ಹಾದಿ ಬಹಳ ದೂರವಿತ್ತು . ಬಾಳಪಥದಲ್ಲಿನ ಎಡರು ತೊಡರುಗಳನ್ನು ಸರಿಸಿ , ಸುಗಮಗೊಳಸಿಕೊಂಡೆ .
ಅವಳೊಂದಿಗೆ ಹೆಜ್ಜೆ ಹಾಕಲು ನಿರ್ಧರಿಸಿದೆ .

ooo

## ಗಝಲ್



ರಶ್ಮಿ ಸನಿಲ್

ನನ್ನ ಅಕ್ಷಿಯಲಿ ನಿನ್ನದೇ ಪ್ರತಿಬಿಂಬ ಕಾಣಲು ಕನ್ನಡಿ ಆಗುವೆಯಾ ಬಾಲೆ
ಕಣ್ಣೋಟಕ್ಕೆ ಮರುಳಾದ ಜೀವವ ಪ್ರೇಮದಿ ಮುಳುಗಿಸಿ ಬಿಡುವೆಯಾ ಬಾಲೆ

ಕಂಬನಿಯು ಹರಿಯದಿರಲಿ ನಿನ್ನ ಬೊಗಸೆ ಕಂಗಳಲಿ ನಾನಿರುವೆ
ಮಗುವಾಗಿ ನೋಡಿಕೊಳ್ಳಲು ಒಂದು ಅವಕಾಶವ ನೀಡುವೆಯಾ ಬಾಲೆ

ಕಂಡ ಕ್ಷಣದಿಂದ ಪ್ರೀತಿಯ ಸುಸ್ವರಗಳು ನಿದ್ದೆಯಲ್ಲೂ ರಿಂಗಣಿಸಿದೆ
ಮನದಿ ಮೂಡಿದ ರಂಗಿನ ಕನಸುಗಳ ಪೂರೈಸಲು ಬರುವೆಯಾ ಬಾಲೆ

ತಪೋವನದಿ ಮಂದಸ್ಮಿತ ಕೊಸರುವ ಕೋಮಲ ತರುಣಿ ಒಪ್ಪಿಕೋ ಈ ನಿವೇದನೆ
ಹೃದಯದಿ ಒಲವ ಹೊಳೆಯನು ಹರಿಸಿ ಪುಷ್ಕರಿಣಿಯಾಗಿ ಇರುವೆಯಾ ಬಾಲೆ

ಸೌಂದರ್ಯ ಲಹರಿಯಲಿ ವೀಣೆ ನುಡಿಸುವ ವೀಣಾಪಾಣಿಯಾಗಿ ಬಾಳಿಗೆ ಬಾ
ಹೊನಲನು ಚಿಮ್ಮಿಸಿದ ಕಣ್ಮಣಿ, ಕೋಲ್ಮಿಂಚಿನ ರಶ್ಮಿಯಂತೆ ಸೇರುವೆಯಾ ಬಾಲೆ

ooo

# ವ್ಯಕ್ತಿ ಮತ್ತು ಪುಸ್ತಕ ಪರಿಚಯ-ಟಿ ಸುನಂದಮ್ಮ



ಮಂಜುಳ ಪ್ರಸಾದ್

ಕನ್ನಡ ನಾಡಿನ ಮೊಟ್ಟ ಮೊದಲ ಮಹಿಳಾ ಹಾಸ್ಯ ಸಾಹಿತಿ ಎಂಬ ಹೆಗ್ಗಳಿಕೆಗೆ ಪಾತ್ರರಾದವರು ಟಿ ಸುನಂದಮ್ಮರವರು. ಸದಾಭಿರುಚಿಯ ಹಾಸ್ಯ ಲೇಖನಗಳು, ನಾಟಕಗಳು ಮತ್ತು ಕವಿತೆಗಳನ್ನು ರಚಿಸಿ ಜನರ ಮನಸ್ಸಿನಲ್ಲಿ ನೆಲೆಯೂರಿ ಕನ್ನಡ ಹಾಸ್ಯ ಜಗತ್ತನ್ನು ವಿಸ್ತರಿಸಿದ ಕೀರ್ತಿ ಅವರದು. ತಮ್ಮ ಒಂಬತ್ತನೆಯ ವಯಸ್ಸಿನಲ್ಲಿಯೇ ಕವನವನ್ನು ಪ್ರಕಟಿಸಿ, ಜನಮನ್ನಣೆ ಗಳಿಸಿ ನಂತರ ಕೊರವಂಜಿ ಪತ್ರಿಕೆಯ ಮೂಲಕ ತಮ್ಮ ಹಾಸ್ಯ ಲೇಖನಗಳನ್ನು ಪ್ರಕಟಿಸಿದವರು ಅವರು. ಇಷ್ಟೇ ಸಾಲದೆಂಬಂತೆ ಕನ್ನಡ ನಾಡಿನ ಹಿರಿಯ ಕಿರಿಯ ಲೇಖಕಿಯರನ್ನು ಒಗ್ಗೂಡಿಸಿ ಕರ್ನಾಟಕದಲ್ಲಿ ಲೇಖಕಿಯರ ಸಂಘವನ್ನು ಪ್ರಾರಂಭಿಸಿ ಅದರ ಪ್ರಥಮ ಅಧ್ಯಕ್ಷೆಯಾದವರು ಟಿ ಸುನಂದಮ್ಮರವರು. 1979ರಲ್ಲಿ ಈ ಸಂಘ ಪ್ರಾರಂಭವಾದಾಗ ಹಲವರಿಗೆ ಅಚ್ಚರಿಯಾದರೂ, ಮುಂದೆ ಬಹಳ ಸದಸ್ಯರನ್ನು ಒಳಗೊಂಡು ಜಿಲ್ಲಾ ಶಾಖೆಗಳೊಂದಿಗೆ ಬೃಹತ್ ಆಗಿ ಇದು ಬೆಳೆದು ನಿಂತಿತು.




ಸುನಂದಮ್ಮನವರು ಸಾವಿರಾರು ನಗೆ ಕಾರಂಜಿಗಳನ್ನು ತಮ್ಮ ಹಲವಾರು ದಶಕಗಳ ಬರಹದಲ್ಲಿ ಕನ್ನಡ ನಗೆ ಸಾಹಿತ್ಯಕ್ಕೆ ಬಳುವಳಿಯಾಗಿ ನೀಡಿದ್ದಾರೆ. ಎಲ್ಲಾ ಹಬ್ಬಗಳ ವಿಶೇಷ ಅಂಕಣಗಳಲ್ಲಿ ಅವರ ಲೇಖನಗಳು ಇದ್ದೇ ಇರುತ್ತಿದ್ದವು. ಹಾಗೆ ಅವರು ಬರೆದ ಉತ್ತಮ ಲೇಖನಗಳನ್ನು ಮುಂದಿನ ತಲೆಮಾರಿಗೆ ಪರಿಚಯಿಸುವ ನಿಟ್ಟಿನಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರವು ಟಿ ಸುನಂದಮ್ಮನವರ ಸಾಹಿತ್ಯ ವಾಚಿಕೆಯ ಮುದ್ರಣದ ಪ್ರತಿಫಲವಾಗಿ ಡಾ. ವಸುಂದರಾ ಭೂಪತಿ ರವರ ಅಧ್ಯಕ್ಷತೆಯಲ್ಲಿ ಹಾಸ್ಯ ಸಾಹಿತಿಗಳಾದ ಪ್ರೊ. ಭುವನೇಶ್ವರಿ ಹೆಗಡೆಯವರು ಸಂಪಾದಿಸಿರುವ ಕೃತಿ "ಟಿ ಸುನಂದಮ್ಮ ಸಾಹಿತ್ಯ ವಾಚಿಕೆ" ಎಂಬುದು ಅತ್ಯಂತ ಮಹತ್ವದ್ದಾಗಿದೆ.

ಕನ್ನಡದ ಎಲ್ಲ ಪತ್ರಿಕೆಗಳು ಅವರ ಬರಹಗಳಿಗೆ ಅವಕಾಶ ನೀಡಿದಂತೆ ಸುನಂದಮ್ಮನವರಿಗೆ ಆಕಾಶವಾಣಿಯ ಜೊತೆಗೂ ಅನುಬಂಧವಿತ್ತು. ಮೈಸೂರು, ಬೆಂಗಳೂರು ಆಕಾಶವಾಣಿ

ಕೇಂದ್ರಗಳು ಸುನಂದಮ್ಮನವರ ಅನೇಕ ನಾಟಕ ಮತ್ತು ಭಾಷಣ ಹಾಗೂ ಇನ್ನಿತರ ಮಹಿಳಾ ಕಾರ್ಯಕ್ರಮಗಳನ್ನು ಬರೆಸಿದ್ದವು. ನೃತ್ಯ ರೂಪಕಗಳು, ಮಾಸ್ತಿಯವರ ಕಥೆಗಳ ರೇಡಿಯೋ ರೂಪಾಂತರ ಇವುಗಳನ್ನು ಬೆಂಗಳೂರು ಆಕಾಶವಾಣಿಗಾಗಿ ಸುನಂದಮ್ಮನವರು ಬರೆದಿದ್ದರು. ಇಷ್ಟೇ ಅಲ್ಲದೆ ಇವರು ಗಂಭೀರ ಸಾಹಿತ್ಯದಲ್ಲೂ ಕೈಯಾಡಿಸಿದ್ದಾರೆ ಎಂಬುದು ತಿಳಿದು ಬರುತ್ತದೆ. ದ್ರೌಪದಿ, ಸೀತಾ, ಮಹಿಷಾಸುರ ಮರ್ದಿನಿ ಮುಂತಾದ ರೇಡಿಯೋ ರೂಪಕಗಳು, ಕಣ್ಣೀರು ನಂತಹ ನಾಟಕಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಿರುವ ಆಧುನಿಕ ನಗೆ ಸಾಹಿತ್ಯ, ಡಾ. ಎಮ್ ಶಿವರಾಂ ಹೀಗೆ ಒಟ್ಟು 50ಕ್ಕೂ ಅಧಿಕ ಕೃತಿಗಳು 20ಕ್ಕೂ ಅಧಿಕ ನಾಟಕಗಳು ಕೆಲವು ಕವಿತೆಗಳು ಇವರಿಂದ ರಚಿತವಾಗಿದೆ. ಇವರ ಲೇಖನಗಳು ಬೇರೆ ಭಾಷೆಗಳಿಗೂ ಅನುವಾದಗೊಂಡು ಹೆಸರು ಮಾಡಿವೆ. ಸುಮಾರು 50 ವರ್ಷಕ್ಕೂ ಅಧಿಕ ಕಾಲ ಕನ್ನಡ ಸಾಹಿತ್ಯದ ಸೇವೆ ಮಾಡಿದ ಸುನಂದಮ್ಮನವರು 2006ರಲ್ಲಿ ನಿಧನರಾಗಿದ್ದರೂ ಇಂದಿಗೂ ಕನ್ನಡಿಗ ಓದುಗರ ಹೃದಯದಲ್ಲಿ ಚಿರವಾಗಿ ನೆಲೆಸಿದ್ದಾರೆ.

ಪ್ರಸ್ತುತ ಈ ಪುಸ್ತಕವು ಸರಿಸುಮಾರು ನಲವತ್ತೆಂಟು ಹಾಸ್ಯ ಲೇಖನಗಳು ಒಂದು ಕವನ ಮೂರು ಲೇಖನಗಳು ಮತ್ತು ನಾಲ್ಕು ನಾಟಕಗಳು ಒಳಗೊಂಡಿದೆ. ಎಲ್ಲವೂ ಟಿ ಸುನಂದಮ್ಮರವರ ಲೇಖನಿಯಿಂದ ಮೂಡಿ ಬಂದ ಬರಹಗಳಾಗಿವೆ ಮತ್ತು ಇವುಗಳನ್ನು ಒಗ್ಗೂಡಿಸಿಕೊಟ್ಟ ಕೀರ್ತಿ ಶ್ರೀಮತಿ ಭುವನೇಶ್ವರಿ ಹೆಗಡೆ ರವರಿಗೆ ಸಲ್ಲುತ್ತದೆ. ಅವರೇ ಹೇಳಿದಂತೆ ಸುನಂದಮ್ಮನವರ ಸಮಗ್ರ ಸಾಹಿತ್ಯವನ್ನು ಒಂದು ನಿಖರ ಪರಿಮಾಣದಿಂದ ವಿಂಗಡಿಸುವುದು ಸಾಧ್ಯವಿಲ್ಲ. ಸಾಧುವೂ ಅಲ್ಲ. ಹಾಗಾಗಿ ಪ್ರಾತಿನಿಧಿಕವಾಗಿ ಅವರ ಮುಖ್ಯ ಕೊಡುಗೆಯಾದ ಹಾಸ್ಯ ಲೇಖನಗಳಿಗೆ ಹೆಚ್ಚಿನ ಪ್ರಾತಿನಿಧ್ಯ (ಸ್ಥಳಾವಕಾಶ) ನೀಡಿ ಸೀಮಿತ ಸಂಖ್ಯೆಯ ಕವನಗಳು, ನಾಟಕಗಳು ಹಾಗೂ ಲೇಖನಗಳನ್ನು ಈ ಕೃತಿಯಲ್ಲಿ ಸೇರಿಸಿದ್ದೇನೆ ಎಂದಿದ್ದಾರೆ.

ಹಾಸ್ಯ ಲೇಖನಗಳಲ್ಲಿ ಪ್ರಮುಖವಾಗಿ ಅಖಿಲ ಭಾರತ ಅತ್ತೆಯರ ಪರಿಷತ್ತು, ಅಪ್ಪಣ್ಣನ ಕಥಾ ಸಂಗಮ, ಬರ ಪರಿಹಾರ, ಗೊರಕೆ ಗಂಡಂದಿರು, ಕಸದಲ್ಲಿ ರಸ, ಮೈಲಾರಯ್ಯನ ಟ್ರಿಪ್ಪು, ಮೊಮ್ಮಗಳು ಮತ್ತು ದಸರೇ, ನನ್ನ ಅತ್ತೆಗಿರಿ, ನಾರದಾವತಾರ, ನೆರೆಹೊರೆ, ಸಮಾಜ ಸೇವೆ, ಶಿವನ ಸೋಲು, ವಿಡಿಯೋ ವಿವಾಹ, ಯಾರಿಗಾಗಿ ಮುಂತಾದ ಹಾಸ್ಯ ಲೇಖನಗಳು ಬಹಳ ಗಮನ ಸೆಳೆಯುತ್ತವೆ.

"ಅಖಿಲ ಭಾರತ ಅತ್ತೆಯರ ಪರಿಷತ್ತಿನಲ್ಲಿ" ಮೂಡಿಬರುವ ಸಾಮಾನ್ಯ ಸಂಭಾಷಣೆಗಳು ಇಲ್ಲೇ ಅಕ್ಕಪಕ್ಕದ ಮನೆಯಲ್ಲಿ ನಡೆದಷ್ಟು ಸಾರಾಸಗಟಾಗಿ ಓದುಗರ ಮನಸ್ಸಿಗೆ ತಲುಪುತ್ತದೆ. ಕೊನೆಗೆ ಅದು ಕನಸು ಎಂದು ಮನವರಿಕೆಯಾಗ ಓದುಗರ ಮನದಲ್ಲಿ ಮಂದಹಾಸ ಮೂಡದೆ ಇರಲಾರದು.

ಬರ ಪರಿಹಾರ ಎಂಬ ಹಾಸ್ಯ ಲೇಖನದಲ್ಲಿ ಹಳೆಯ ದಾಟಿಯಲ್ಲಿ ಲೇಖಕರು ತಮ್ಮ ಸರಸು ಮತ್ತು ಮೈಲಾರಯ್ಯನ ಪ್ರಹಸನವನ್ನು ತಂದಿಡುತ್ತಾರೆ. ಈ ಜೋಡಿ ಎಷ್ಟು ಹೆಸರು ಮಾಡಿದ್ದರೆಂದರೆ, ಇದು ಸುನಂದಮ್ಮ ರವರು ವಾಸಿಸುತ್ತಿದ್ದ ಬಡಾವಣೆಯ ಮಧ್ಯಮ ಮತ್ತು ಮೇಲ್ಮಧ್ಯಮ ವರ್ಗದ ಬದುಕಿನ ಭಂಗ ಬದಲಾವಣೆಗಳನ್ನು ವಿನೋದ ಎಳೆಗಳಲ್ಲಿ ನೇಯ್ದು, ಒಂದು ಸ್ಥಾಯಿ ಕುಟುಂಬವನ್ನು ಅರ್ಥಾತ್ ಸರಸು ಮೈಲಾರಯ್ಯ ಎಂಬ ಕಾಮಿಕ ದಂಪತಿಗಳನ್ನು ಸೃಷ್ಟಿಸಿದ್ದರು. ಮೈಲಾರಯ್ಯ ತಾಮಸ ಪ್ರಕೃತಿಯ ವ್ಯಕ್ತಿಯಾದರೆ, ಅವನ ಸಮತೋಲನಕ್ಕೆ ಸರಸ ಅಂದರೆ ಅವಳ ಅರ್ಧಂಗಿ ಸರಸು ಹೆಸರಿನ ಸರಸಮ್ಮ ತಮ್ಮ ಆರು ಮಕ್ಕಳೊಂದಿಗೆ ಎಲ್ಲಾ ರೀತಿಯ ನೈಜ ಪ್ರಸಂಗಗಳಿಗೆ ಮನೆ ಮಾತಾಗಿದ್ದರು. ಜನಸಾಮಾನ್ಯರ ಮನೆಗಳಲ್ಲೂ ಅವರ ಪಾತ್ರಗಳಿಗೆ ಹೊಂದಾಣಿಕೆಯಾಗುವ ವರ್ತನೆಗಳು ಕಂಡು ಬಂದರೆ ಅವರಿಗೂ ಅದನ್ನೇ ಹೋಲಿಸಿ ಹೇಳುತ್ತಿದ್ದು ಸಾಮಾನ್ಯವಾಗಿತ್ತೆಂದರೆ ಈ ಪಾತ್ರಗಳು ಎಷ್ಟು ಜನ ಮನ್ನಣೆ ಗಳಿಸಿದ್ದವು ಎಂಬುದನ್ನು ಅರಿತುಕೊಳ್ಳಬಹುದು.

ಹಾಗೆಯೇ ಸುನಂದಮ್ಮ ರವರು ತಮ್ಮ ಮೊನಚಾದ ಹಾಸ್ಯದ ಮೂಲಕವೇ ಸಮಾಜಕ್ಕೆ ಚಿಕಿತ್ಸೆ ನೀಡುವ ವೈದ್ಯರಾಗಿದ್ದರು ಎಂಬುದಾಗಿ ಪ್ರೊ ಭುವನೇಶ್ವರಿ ಹೆಗಡೆ ರವರ ಅಭಿಪ್ರಾಯ ನಿಜಕ್ಕೂ ಅವರ ಲೇಖನಗಳನ್ನು ಓದಿದಾಗ ಅರಿವಾಗುತ್ತದೆ. ಬರಿಯ ಲೇಖನಗಳಷ್ಟೇ ಅಲ್ಲ ಅವರ ಕವನಗಳು ನೇರವಾಗಿ ಓದುಗನ ಹೃದಯ ತಟ್ಟುತ್ತದೆ. ಅದರಲ್ಲೂ ಹೆಣ್ಣು ಮಕ್ಕಳ ಮನಸ್ಥಿತಿಯಲ್ಲಿ ಬರೆದ ಕವನಗಳು ಮುಖ್ಯವಾಗಿ ಗೃಹಿಣಿಯ ಕವನಗಳು ಅಡಿಗೆ ಮನೆಯ ವಸ್ತುಗಳನ್ನು ಬಳಸಿಕೊಂಡು ಜೀವನ ಅನುಭವ ಹೇಳುವ ಅವರ ಅಸಾಧಾರಣ ಪ್ರತಿಭೆಗೆ ಹಿಡಿದ ಕೈಗನ್ನಡಿಯಾಗಿದೆ. ಇವುಗಳಲ್ಲಿ ಐದನೆಯ ಮಗುವಿಗೆ ಒಂದು ವ್ಯಂಗ್ಯದ ಜೋಗುಳ ಇದೆ. ಅದರಲ್ಲಿ ಆ ತಾಯಿಯ ಅಸಹಾಯಕತೆ, ಮಗುವಿನ ಕಾಳಜಿ, ಬೇಕು ಬೇಡದ ಆರೈಕೆ ಮತ್ತು ಹಾರೈಕೆಗಳು ಬಹಳ ಸುಂದರವಾಗಿ ನಿರೂಪಿತವಾಗಿದೆ.

ಇನ್ನು ವೈಚಾರಿಕ ಲೇಖನಗಳ ವಿಷಯದಲ್ಲಿ ಆಧುನಿಕ ಕನ್ನಡ ನಗೆ ಸಾಹಿತ್ಯ ಹುಟ್ಟಿದ ಬಗ್ಗೆ, ಹರಟೆಗಳಿಂದ ತಲೆ ಹರಟೆ ಎಂಬುದು ಒಪ್ಪವಾಗಿ ಲಲಿತ ಪ್ರಬಂಧಗಳ ಮಟ್ಟದ ಇಲ್ಲದ ಗಾಂಭೀರ್ಯ, ಸಂಯಮದ ಚೌಕಟ್ಟು, ಹರಟೆ ಹಾಸ್ಯ ಲೇಖನಗಳಲ್ಲಿ ಕಂಡುಬರುವ ಬಗ್ಗೆ ಕೂಲಂಕುಷವಾಗಿ ವಿವರಿಸಿದ್ದಾರೆ. ತಮ್ಮ ಜೊತೆ ಜೊತೆಗೆ ಹಾಸ್ಯ ಲೇಖನಗಳನ್ನು ಬರೆದ ನಾ ಕಸ್ತೂರಿ, ಬೀಚಿ, ನಾಡಿಗೇರ ಕೃಷ್ಣರಾಯರು, ಜಿಪಿ ರಾಜರತ್ನಂ, ರಾಕು, ಬುಳ್ಳ ಮೂರ್ತಿರಾವ್ ಮುಂತಾದವರ ಹೆಸರುಗಳನ್ನು ಪ್ರಸ್ತಾಪಿಸುತ್ತಾ ಅವರ ಹಾಸ್ಯ ಶೈಲಿಗಳನ್ನು ವಿಡಂಬನೆ ಮಾಡಿದ್ದಾರೆ. ಇದರಿಂದ ಕನ್ನಡ ಸಾಹಿತ್ಯ ಲೋಕದ ನಗೆ ಸಾಹಿತಿಗಳ ಸಮಗ್ರ ಪರಿಚಯ ನಮಗೆ ಆಗುತ್ತದೆ.

ಅದೇ ರೀತಿ ಹಾಸ್ಯ ಪ್ರಕಾರಗಳಲ್ಲಿ ಸ್ಥಳೀಯ ಹಾಸ್ಯಕ್ಕೆ ಹೆಚ್ಚಿನ ಮನ್ನಣೆ ಇರುತ್ತದೆ. ಅದರಂತೆ ಲೇಖಕಿ ಬೆಂಗಳೂರು ನೆನಪು ನಂಟು, ಸಜ್ಜನಿಕೆ ಸರಳತೆಯ ತುಮಕೂರು ಮುಂತಾದ

ಲೇಖನಗಳಲ್ಲಿ ಪ್ರಾದೇಶಿಕ ಹಾಸ್ಯದ ಬಗ್ಗೆ ಬಹಳ ಅದ್ಭುತವಾಗಿ ವರ್ಣಿಸಿದ್ದಾರೆ. ಕೃತಿ ಓದುವುದಕ್ಕಿಂತ ಅಭಿನಯದಲ್ಲಿ ಹೆಚ್ಚು ಪ್ರೇಕ್ಷಕರನ್ನು, ಸಹೃದಯರನ್ನು ಸಾಹಿತ್ಯ ಮುಟ್ಟುತ್ತದೆ ಎಂಬುದಕ್ಕೆ ನಿದರ್ಶನವಾಗಿ ಇವರು ಕೆಲವು ಹಾಸ್ಯ ನಾಟಕಗಳನ್ನು ರಚಿಸಿದ್ದಾರೆ. ಪ್ರತಿಯೊಂದು ಪಾತ್ರವೂ ಓದುಗರನ್ನು/ ಪ್ರೇಕ್ಷಕರನ್ನು ನಗೆಗಡಲಿನಲ್ಲಿ ತೇಲಿಸುವುದರಲ್ಲಿ ಸಂಶಯವೇ ಇಲ್ಲ.
ಬಲಿ, ಎರಡು ನೋಟ, ಕೂಸು ಹುಟ್ಟುವುದಕ್ಕೆ ಮುಂಚೆ, ಸಂಕ್ರಾಂತಿ ಆಧುನಿಕ ಮುಂತಾದ ನಾಟಕಗಳು ಸುನಂದಮ್ಮ ರವರ ನಾಟಕ ರಚನಾ ಸಾಮರ್ಥ್ಯಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ಒಟ್ಟಾರೆಯಾಗಿ ಈ ಪುಸ್ತಕವು ಟಿ ಸುನಂದಮ್ಮನವರ ಸಾಗರದಷ್ಟು ಪ್ರತಿಭೆಯನ್ನು ಬೊಗಸೆಯಲ್ಲಿ ಹಿಡಿದು ಅದ್ಭುತವಾಗಿ ತೋರಿಸುವ ಅಮೋಘ ಕೃತಿಯಾಗಿದೆ ಎಂದರೆ ತಪ್ಪಾಗಲಾರದು. ಹಾಗೆಯೇ ಪುಸ್ತಕ ಓದುತ್ತಾ ನಮ್ಮ ಕನ್ನಡದ ಹೆಮ್ಮೆಯ ಮೊದಲ ಹಾಸ್ಯ ಬರಹಗಾರ್ತಿ ಸುನಂದಮ್ಮ ರವರ ಬಗ್ಗೆ ತುಂಬ ಮನದ ಗೌರವ ಮೂಡದೆ ಇರದು. ಆ ತಾಯಿಗೆ ಸಾಷ್ಟಾಂಗ ಪ್ರಣಾಮಗಳು.

ooo



# ಅಪ್ಪನೆಂಬ ಆಕಾಶ





ಮಾಲತಿ ಮುದಕವಿ

ಅಪ್ಪ ಎಂದರೆ ಎಲ್ಲರಿಗೂ ಒಂದು ರೋಲ್ ಮಾಡೆಲ್. " ನನ್ನ ಅಪ್ಪನು ನನಗೆ a teacher, guide and philosopher... ಎಂದೇ ಹೇಳುತ್ತೇವೆ. ನಾವೇ ನಮ್ಮ ಆಯುಷ್ಯದ ಬಹಃ ಭಾಗವನ್ನು ಕಳೆದರೂ ಇನ್ನೂ ಬಾಲ್ಯ ಎಂದಾಗ ನೆನಪಾಗುವುದು ಅಪ್ಪ, ಅವ್ವ, ಸೋದರ, ಸೋದರಿಯರು... ಗೆಳೆಯ ಗೆಳತಿಯರು... ನಮ್ಮ ಊರು, ನಮ್ಮ ಶಾಲೆ. ಗುರುಗಳು... ಒಂದೇ ಎರಡೇ...!

ಅಪ್ಪ ಯಾವಾಗಲೂ ಎಲ್ಲವನ್ನೂ ಮಕ್ಕಳು, ಸಂಸಾರ ಎಂದೇ ಇರಿಸಿ, ತಾನು, ತನಗಾಗಿ ಎಂದು ಒಂದೇ ಪೈಸೆಯನ್ನು ಖರ್ಚು ಮಾಡಬೇಕಾದರೂ ನೂರು ಬಾರಿ ಯೋಚಿಸುವಂಥ ತ್ಯಾಗಜೀವಿ. ಆದರೂ ಅಪ್ಪನ ತ್ಯಾಗ ನಮಗೆ ಚಿಕ್ಕಂದಿನಲ್ಲಿ ಕಾಣುವುದೇ ಇಲ್ಲ.. ದೊಡ್ಡವರಾದಂತೆ ಅರ್ಥವಾಗುವ ಹೊತ್ತಿಗೆ ಒಮ್ಮೊಮ್ಮೆ ಅಪ್ಪ ನೇಪಥ್ಯಕ್ಕೆ ಸರಿದೂಬಿಟ್ಟಿರುತ್ತಾನೆ
ನಮ್ಮ ಅಪ್ಪ ಹಳೆಯ ಸಂಪ್ರದಾಯದವನು..

ಮಡಿ, ದೇವರ ಪೂಜೆ, ಆಚಾರಗಳಲ್ಲಿ ಬಹಳ ಕಟ್ಟುನಿಟ್ಟು.. ಆದರೆ ಅವನ ಸ್ವಭಾವ ಬಹಳ ಸಾಧು.. ನಿಷ್ಕಲ್ಮಶ ಹೃದಯಿ.

"ಮಗಳ, ಜೀವನದಾಗ ಎಂದೂ ಸುಳ್ಳು ಹೇಳಬಾರ್ದು.."
ಅಪ್ಪನಿಗೆ ಸುಳ್ಳು ಹೇಳುವುದು ಎಂದೂ ಇಷ್ಟವಾಗುತ್ತಲಿರಲಿಲ್ಲ. ಅದಕ್ಕೆ ಕಾರಣ ಅವನ ಜೀವನದಲ್ಲಿ ಉಂಟಾದ ಕಹಿ ಅನುಭವಗಳೇ ಇರಬಹುದೇನೋ. ತಾಯಿಯಿಲ್ಲದ ಮಕ್ಕಳನ್ನು ತಪ್ಪು ಮಾಡಿದಾಗ ಹೇಗೆ ಶಿಕ್ಷಿಸಬೇಕೆಂಬುದನ್ನೂ ಅರಿಯದ ತಂದೆ.. ಹೀಗಾಗಿ ಬಹಳಷ್ಟು ಬಾರಿ ಪೆಟ್ಟೂ ತಿಂದೇ ಈ ಸತ್ಯವಂತಿಕೆಯನ್ನು ಕಲಿತಿದ್ದನೇನೋ. ಅವನು ಸುಳ್ಳು ಹೇಳುವುದನ್ನು ಎಂದೂ ಕ್ಷಮಿಸುತ್ತಿದ್ದಿಲ್ಲ, ತಾನೂ ಎಂದೂ ಸುಳ್ಳು ಹೇಳುತ್ತಿರಲಿಲ್ಲ.. .

ಒಂದ ಸುಳ್ಳ ಹೇಳಿದ್ರ ಅದನ ಮುಚ್ಚಿಡಲಿಕ್ಕೆ ಮತ್ತೊಂದು ಸುಳ್ಳು ಪೋಣಿಸಬೇಕಾಗತದ.. ಆಮ್ಯಾಲ ಒಮ್ಮೆ ನೀ ಸುಳ್ಳು ಹೇಳತೀ ಅಂತ ಮಂದಿಗೆ ಗೊತ್ತಾತಂದ್ರ ಮುಂದ ನೀ ಖರೇ ಹೇಳಿದ್ರೂ ನಿನ್ನ ಮಾತು ಯಾರೂ ನಂಬಂಗಿಲ್ಲಾ. ಅದೂ ಸುಳ್ಳ ಇರಬೇಕೂ ಅಂತಾರ..

ನಂಬಿಕೀ, ವಿಶ್ವಾಸಾ ಇದರ ತಳಪಾಯಾದ ಮ್ಯಾಲೇ ಜೀವನದಾಗಿನ ಎಲ್ಲಾ ಸಂಬಂಧಗಳೂ ನಿಂತಿರತಾವು.. ಟಿಕಾಯಿಸ್ತಾವು.."

"ನೀ ಸಾಲ್ಯಾಗ ಭಾಳ ಶಾಣೇಕಿದ್ದೀ ಅಂತ.. ನಿಮ್ಮ ಮಾಸ್ತರು ಹೇಳಿದ್ರು.. ನೀ ದೊಡ್ಡಾಕಿ ಆದಿಂದ ಏನಾಗತೀಯವಾ.. ?"

ನಾನು ಅಪ್ಪನ ಪ್ರಶ್ನೆಗೆ ಉತ್ಸಾಹದಿಂದ ಉತ್ತರಿಸಿದ್ದೆ, "ನಾ ಅಪ್ಪಾ, ನಾ ಇಂಜಿನೀಯರಾಗತೇನಿ.. " ಎಂದು.

"ನಿಂಗ ಗೊತ್ತದ ಏನು ಇಂಜಿನೀಯರ ಆಗಬೇಕಾದರ ಗಣಿತದಾಗ ಭಾಳ ಮಾರ್ಕ್ಸ್ ತೊಗೊಬೇಕಾಗತದ.. ಗಣಿತ ಬರಬೇಕಾದರ ಮಗ್ಗಿ ಬಾಯಿಪಾಠ ಬರೂದು ಅಗದೀ ಕಂಪಲ್ಸರೀ.. ಅಂದ ಮ್ಯಾಲೆ ನೀ ಮಗ್ಗೀ ಘೊಟೋತನ್ಯಾಗ ಕಲೀಬೇಕಾಗತದ.." ಅಂದಿದ್ದ. ನಾನು ಹೂಂಗುಟ್ಟಿದ್ದೆ..

ನಾನು ಓಡಿಹೋಗಬಾರದೆಂದು ನನ್ನನ್ನು ತನ್ನ ಹೆಗಲ ಮೇಲೆ ಕೂಡ್ರಿಸಿಕೊಂಡು ಮಗ್ಗೀ ಹೇಳಿಕೊಡಲಾರಂಭಿಸಿದ್ದ. ಪ್ರತಿದಿನ ಒಂದು ಮಗ್ಗಿ. ಕೇವಲ ಹದಿನೈದು ದಿನಗಳಲ್ಲಿ ಹದಿನೈದರ ತನಕ ಮಗ್ಗಿಗಳನ್ನು ಕಲಿತಿದ್ದೆ. ಅದೂ ಒಂದಿಷ್ಟೂ ತಡವರಿಸದೇ. ಪರೀಕ್ಷೆ ಬಂದಿತ್ತು. ಲೇಖಿಯಲ್ಲಿ(ಬರೆಯುವ), ತೋಂಡಿಯಲ್ಲಿ(ಓರಲ್) ಒಂದನೇ ನಂಬರ್ ಬಂದಿದ್ದೆ. ಅದೇ ಮಾಸ್ತರು ಮನೆಗೆ ಬಂದು ಹೇಳಿ ಹೋಗಿದ್ದರು, "ನಿಮ್ಮ ಸುನೀ ಕ್ಲಾಸಿಗೆ ಒಂದನೇ ನಂಬರ್ ಬಂದಾಳ.." ಎಂದು!

ಚಿಕ್ಕಂದಿನಲ್ಲಿ ಎಲ್ಲಾ ವಿಷಯಗಳಲ್ಲಿಯೂ ತುಂಬ ಚುರುಕಾಗಿದ್ದಕ್ಕೋ ಏನೋ ನಮ್ಮ ಅಪ್ಪನಿಗೆ ನನ್ನ ಮೇಲೆ ಅಭಿಮಾನ ಬಹಳ. ಅವನಿಗೆ ನನ್ನ ಬಗ್ಗೆ ಅನೇಕ ಕನಸುಗಳೂ ಇದ್ದವು. ಎಸ್. ಎಸ್. ಎಲ್. ಸಿ. ಯಲ್ಲಿ ಗಣಿತದಲ್ಲಿ ನೂರಕ್ಕೆ ತೊಂಭತ್ತೆರಡು ಅಂಕ ಗಳಿಸಿದಾಗ, "ಸುನೀ, ನೀ ಆಯ್. ಎ. ಎಸ್. ಪರೀಕ್ಷಾಕ್ಕ ಕೂಡಬೇಕು ನೋಡು.. " ಎಂದು ಹೇಳುತ್ತಿದ್ದ. ಚಿಕ್ಕಂದಿನಿಂದಲೂ ಸಣ್ಣ ಪುಟ್ಟ ಲೇಖನಗಳನ್ನು ಬರೆದು ಬಾಲವಿಭಾಗಕ್ಕೆ ಕಳಿಸುವ ರೂಢಿ ನನಗೆ. ಆಗಿನ ಪ್ರಸಿದ್ಧ ವಾರಪತ್ರಿಕೆಯಾದ ಕರ್ಮವೀರದ ಬಾಲವಿಭಾಗದಲ್ಲಿ ಮೊದಲಬಾರಿಗೆ ನನ್ನ ಲೇಖನವೊಂದು ಪ್ರಕಟವಾದಾಗ "ನೀನು ದೊಡ್ಡ ಲೇಖಕಿಯಾಗಬೇಕು ಸುಧಿ.." ಎನ್ನುವವ.. ಯುವವಾಣಿಯಲ್ಲಿ (ರೇಡಿಯೋ) ನನ್ನ ಕವನ ವಾಚನ, ಭಾಷಣ, ಬಿತ್ತರಗೊಳ್ಳುವಾಗಲಂತೂ ಅವನಿಗೆ ಸಂಭ್ರಮವೋ ಸಂಭ್ರಮ. ಪ್ರತಿದಿನದ ಊಟದ ವೇಳಾಪಟ್ಟಿ ಅಂದು ಬದಲಾಗುತ್ತಿತ್ತು. ರಾತ್ರಿ ಎಂಟರ ಊಟ ಅಂದು ಎಂಟೂವರೆಗೆ ಮುಂದೂಡಲ್ಪಡುತ್ತಿತ್ತು. ನನ್ನ ಕಾರ್ಯಕ್ರಮ ಕೇಳಿಯೇ ಅಂದು ಊಟ. ಊಟ ಮಾಡುವಾಗ ಆ ದಿನದ ಕಾರ್ಯಕ್ರಮದ ವಿಮರ್ಶೆ.. ಹೀಗೆ ಸಣ್ಣ ಪುಟ್ಟ ವಿಷಯಗಳಿಗೆಲ್ಲ ಸಂಭ್ರಮ ಪಡುವ ಅವನ ಪರಿ ನೆನಪಾದರೆ ಇಂದಿಗೂ ನನ್ನ ಕಣ್ಣುಗಳು ಮತ್ತೆ ಒದ್ದೆಯಾಗುತ್ತವೆ.

ಅಪ್ಪ ಹಳೆಯ ಕಾಲದವನೇ ಆಗಿದ್ದರೂ ಅವನಿಗೆ ಎಲ್ಲರಂತೆ "ಗಂಡುಮಕ್ಕಳೇ ಸರ್ವಸ್ವ.. ಅವರಿಂದಲೇ ಮೋಕ್ಷ ಪ್ರಾಪ್ತಿ.. ಸಾಯುವ ಕಾಲದಲ್ಲಿ ಬಾಯಿಗೆ ಗಂಗೆ ಹೊಯ್ಯುವವರೇ ಅವರು.. ಕರ್ಮ ಮಾಡುವವರೇ ಅವರು.. " ಎಂಬುವುದರಲ್ಲಿ ಅಂಥ ವಿಶ್ವಾಸವೇನೂ ಇರಲಿಲ್ಲ.. ನಾವಿಬ್ಬರೂ ಹೆಣ್ಣೆಂದು ಎಂದೂ ಹೀಗಳೆದವನಲ್ಲ.

ನನ್ನ ಚೊಚ್ಚಲು ಹೆರಿಗೆಯ ಸಂದರ್ಭ.. ನಾನು ನರ್ಸಿಂಗ್ ಹೋಮಿಗೆ ದಾಖಲಾಗಿದ್ದೆ. ಅಪ್ಪ ಅಂದು ಯಾವುದೋ ಕಾರ್ಯನಿಮಿತ್ತವಾಗಿ ಊರಿಗೆ ಹೋಗಿದ್ದ. ಅಂದು ರಾತ್ರಿ ಊರಿಗೆ ಹಿಂತಿರುಗಿ ಬಂದಾಗ ಅಪ್ಪನಿಗೆ ವಿಷಯ ತಿಳಿದಾಗ ಎರಡು ಕಿಲೋಮೀಟರು ಅಂಥ ನಡುರಾತ್ರಿಯಲ್ಲಿ ನಡೆದುಕೊಂಡೇ ಬಂದಿದ್ದ. ಆದರೆ ಆಸ್ಪತ್ರೆಯ ಮುಖ್ಯದ್ವಾರ ಮುಚ್ಚಿಬಿಟ್ಟಿತ್ತು. ನನ್ನ ರೂಮಿನ ಕಿಟಕಿಯ ಹತ್ತಿರ ಬಂದು ನನ್ನನ್ನು ಕೂಗಿ ಕರೆದು ಕಣ್ತುಂಬ ನೋಡಿದ ದೃಶ್ಯ.. .. ಆ ಪ್ರೀತಿ, ಆ ವಾತ್ಸಲ್ಯ.. ನಾನು ಇನ್ನು ಎಲ್ಲಿ ಹುಡುಕಲಿ..

ನಾನು ಮೇ ತಿಂಗಳ ಸೂಟಿಗೆಂದು ಮಗಳ ಜೊತೆಗೆ ತವರಿಗೆ ಹೋಗಿದ್ದೆ. ಅಪ್ಪನಿಗೆ ಆ ದಿನಗಳಲ್ಲಿ ಮೈಯಲ್ಲಿ ಅರಾಮಿರಲಿಲ್ಲ. ನೆಗಡಿ, ಕೆಮ್ಮು, ಸ್ವಲ್ಪ ಜ್ವರವೂ ಇತ್ತು. ಅಪ್ಪನ ಅರೋಗ್ಯ ಮನೆಮದ್ದಿಗೆ ಸರಿಯಾಗದೆ ಹೋದಾಗ ಡಾಕ್ಟರ್ ಹತ್ತಿರ ಹೋಗಲೇಬೇಕಾಯಿತು. ನಾನು ಅಪ್ಪನನ್ನು ಕರೆದುಕೊಂಡು ಆಸ್ಪತ್ರೆಗೆ ಹೋಗಿದ್ದೆ. ಅವರು ಪರೀಕ್ಷಿಸಿ ಕೂಡಲೆ ಎರಡು ಇಂಜೆಕ್ಷನ್ ಮಾಡಿದ್ದರು. ಒಂದಿಷ್ಟು ಗುಳಿಗೆಗಳನ್ನೂ ಬರೆದುಕೊಟ್ಟಿದ್ದರು.. ಡಾಕ್ಟರಬಿಲ್ಲು ತೀರಿಸಿ, ನಾನು ಅಪ್ಪನನ್ನು ಮನೆಗೆ ಬಿಟ್ಟು ಫಾರ್ಮಸಿಗೆ ಹೋಗಿ ಬರೆದುಕೊಟ್ಟಿದ್ದ ಗುಳಿಗೆಗಳನ್ನು ತಂದಿದ್ದೆ. ಅಪ್ಪ "ಎಷ್ಟ ಆತವಾ ಎಲ್ಲಾ ಕೂಡಿ? ನಿಮ್ಮ ಅವ್ವನ ಹತ್ರ ಇಸಕೊಂಬಿಡು.." ಎಂದು ಹೇಳಿ ಅವ್ವನಿಗೂ "ರೊಕ್ಕಾ ಕೊಡೂ ಅಕಿಗೆ.." ಎಂದು ಹೇಳಿದ್ದ. ನಾನು ಅದನ್ನು ತೆಗೆದುಕೊಳ್ಳದೆ ಹೋದಾಗ ಅವನು "ಹೆಣ್ಣುಮಕ್ಕಳ ರೊಕ್ಕಾ ಹಿಡೀಬಾರದವಾ.. " ಎಂದಿದ್ದ. ಅಂದು ನನಗೆ ಸಿಟ್ಟು ಬಂದಿತ್ತು. ನಾನು "ಅಪ್ಪಾ, ನೀನು ಜೀವನವಿಡೀ ಹೆಣ್ಣು ಗಂಡು ಅಂತ ಭೇದಾ ಮಾಡಲಿಲ್ಲಾ.. ನಮಗ ಒಳ್ಳೆಯ ವಿದ್ಯಾ ಕೊಟ್ಟಿ.. ಸಂಸ್ಕಾರ ಕೊಟ್ಟಿ.. ಒಳ್ಳೆಯ ಮನಿ ನೋಡಿ ಲಗ್ನಾನೂ ಮಾಡಿಕೊಟ್ಟಿ.. ಇಷ್ಟೆಲ್ಲ ನೀ ಯಾವದೇ ಪ್ರತಿಫಲಾ ಅಪೇಕ್ಷಾ ಮಾಡದ ಮಾಡೀದಿ. ನಾನು ನಿನಗ ಇಷ್ಟೂ ಮಾಡಲಿಕ್ಕೆ ಅವಕಾಶ ಕೊಡಂಗಿಲ್ಲೇನು?" ಎಂದು ಜಗಳ ತೆಗೆದಾಗ ಅವನು ನಿರ್ವಾಹವಿಲ್ಲದೆ ಸುಮ್ಮನಾಗಿದ್ದ. ಅಪ್ಪನ ವ್ಯಕ್ತಿತ್ವದ ಒಂದೊಂದೇ ಪದರಗಳು ಬಿಚ್ಚಿದಷ್ಟೂ ಹರಡಿಕೊಳ್ಳುತ್ತಲೇ ಹೋಗುವಂಥ ವೈಶಾಲ್ಯತೆ ಉಳ್ಳವುಗಳು.

ooo

# ಶತಮಾನದ ಮಾದರಿ ಹೆಣ್ಣು

ಶ್ರೀಗಂಧ



ಬಾನು

ಸೃಷ್ಟಿಯ ಮೂಲ ಸ್ತ್ರೀ ಆಗಿದ್ದಾಳೆ. ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀ ಗೆ ಅವಳದೇ ಆದ ಗೌರವ ಸ್ಥಾನಮಾನ ಇದೆ. ಹೆಣ್ಣು ಯಾವುದೇ ಕ್ಷೇತ್ರದಲ್ಲೂ ಪ್ರಬಲ ಶಕ್ತಿಯಾಗಿ ನಿಲ್ಲುವ ಮೂಲಕ ತನ್ನನ್ನು ತಾನು ಗುರುತಿಸಿ ಕೊಂಡಿದ್ದಾಳೆ.

ಪ್ರಾಚೀನ ಕಾಲದಲ್ಲಿ ಅಡುಗೆ ಮನೆಗೆ ಸೀಮಿತವಾಗಿದ್ದ ಮಹಿಳೆ ಇಂದು ಆಕಾಶದಲ್ಲಿ ಹಾರಾಡುತ್ತಿದ್ದಾಳೆ. ಗಡಿಯಲ್ಲಿ ಶತ್ರು ಸೈನ್ಯಗಳ ಜೊತೆ ಕಾದಾಡುವುದರಲ್ಲಿಯೂ ತನ್ನ ಸಾಧನೆ ತೋರಿಸಿದ್ದಾಳೆ. ಒಂದು ಜೀವವನ್ನು ಸೃಷ್ಟಿಸುವ ಶಕ್ತಿ ಮಹಿಳೆಗಿದೆ ಎಂದಾದರೆ, ಅವಳಲ್ಲಿರುವ ಅಗಾಧ ಶಕ್ತಿಯನ್ನು ನಾವು ಊಹಿಸಲೂ ಸಾಧ್ಯವಿಲ್ಲ.

ಸಮಾಜದ ದೃಷ್ಟಿಯಲ್ಲಿ ಮಹಿಳೆಯ ಸ್ಥಾನಮಾನ ಇಂದು ಬದಲಾಗಿದೆ. ಒಬ್ಬೊಬ್ಬರದೂ ಒಂದೊಂದು ದೃಷ್ಟಿಕೋನ. ಇಂದಿನ ಸಮಾಜ ಹಿಂದಿನಂತಿಲ್ಲ. ಹಿಂದೆ ಹೆಣ್ಣು ಮಕ್ಕಳು ಹುಟ್ಟಿದರೆ ಸಮಾಜದಿಂದ ನಿಂದನೆಗೆ ಒಳಾಗುತ್ತಿದ್ದಿದ್ದು ಮಹಿಳೆ. ಇಂದು ಹಾಗಿಲ್ಲ. ದೇವರಿಗೆ ಹರಕೆ ಹೊತ್ತು ಹೆಣ್ಣು ಮಕ್ಕಳು ಬೇಕೆಂದು ಬೇಡುವವರ ಸಂಖ್ಯೆ ಅಧಿಕವಾಗಿದೆ.ಇದು ಖುಷಿಯ ವಿಚಾರ. ಹಿಂದಿಗಿಂತಲೂ ಇಂದು ಹೆಣ್ಣಿನ ಸ್ಥಾನಮಾನ ಬದಲಾಗಿದೆ.

ಕೆಲವರಿಗೆ ಸ್ತ್ರೀ ಕುಟುಂಬದ ಕಟ್ಟುಪಾಡುಗಳಿಗೆ ಒಳಗಾಗಿ ಜೀವನ ನಡೆಸಬೇಕೆಂಬ ಆಸೆ ಇದ್ದರೆ, ಕೆಲವರಿಗೆ ಗಂಡಿಗೆ ಸಮನಾಗಿ ಕೆಲಸ ಕಾರ್ಯಗಳನ್ನು ಹಂಚಿಕೊಳ್ಳಬೇಕೆಂಬ ಆಕಾಂಕ್ಷೆ ಇರುತ್ತದೆ. ಸಮಾಜ ಬಯಸುವಂತೆ ಹೆಣ್ಣು ಇರಲೇ ಬೇಕೆಂಬುದು ನಿಯಮವಲ್ಲ. ತನ್ನ ಇಷ್ಟದಂತೆ ಬದುಕು ರೂಪಿಸಿಕೊಳ್ಳುವ ಹಕ್ಕು ಅವಳಿಗೂ ಇದೆ. ಲಕ್ಷ್ಮಿ , ಸರಸ್ವತಿ ದುರ್ಗೆಯರನ್ನು ಪೂಜಿಸುವ ಈ ಸಮಾಜ ತಮ್ಮ ಮನೆಯ ಹೆಣ್ಣು ಮಕ್ಕಳನ್ನೇ ಕಡೆಗಣಿಸುತ್ತಾರೆ. ಸಮಾಜದಲ್ಲಿ ಇರುವ ನಾನಾ ಜನರು ನಾನಾ ರೀತಿಯಲ್ಲಿ ಯೋಚಿಸುತ್ತಾರೆ. ಇಲ್ಲಿ ಎಲ್ಲರನ್ನು ಮೆಚ್ಚಿಸುವುದು ಸಾಧ್ಯವಿಲ್ಲ. ಸಮಾಜವನ್ನು ಮೆಚ್ಚಿಸುವ ಬದಲಾಗಿ ಸಮಾಜಕ್ಕೆ ಮಾದರಿಯಾಗುವ ಮಹಿಳೆಯಾಗಿ ಬೆಳೆಯಬೇಕು. ನಮ್ಮಿಷ್ಟದಂತೆ ನಾವು ಬದುಕಬೇಕು. ಹೆಣ್ಣು ಎಂದು ಅವಮಾನ ಮಾಡಿದವರೇ ಕರೆದು ಸನ್ಮಾನಿಸುವಷ್ಟು ಎತ್ತರಕ್ಕೆ ಮಹಿಳೆ ಬೆಳೆಯಬೇಕು.

ಆದರೆ ಸ್ತ್ರೀ ಸಮಾನತೆ ಎಂಬ ಹೆಸರಿನಲ್ಲಿ ಕೆಲವು ಸ್ತ್ರೀಯರು ಇತ್ತೀಚಿನ ದಿನಗಳಲ್ಲಿ ಮದ್ಯಪಾನ, ಧೂಮಪಾನ ಮಾಡುತ್ತಾ ಅರೆಬರೆ ಬಟ್ಟೆ ಧರಿಸಿ, ಪ್ರಶ್ನಿಸಿದವರ ಮೇಲೆ ಇಲ್ಲ ಸಲ್ಲದ ಆರೋಪ ಮಾಡುತ್ತಾ, ಸಮಾಜದ ಸ್ವಾಸ್ಥ್ಯವನ್ನು ಕೆಡಿಸುತ್ತಾ ತನ್ನ ಪರವಾಗಿರುವ ಕಾನೂನನ್ನು ದುರುಪಯೋಗಪಡಿಸಿಕೊಂಡು ಅಹಂಕಾರದಿಂದ ವರ್ತಿಸುತ್ತಿದ್ದಾಳೆ. ಇದೆಲ್ಲವನ್ನು ಬಿಟ್ಟು ಸಮಾಜಕ್ಕೆ ಮಾದರಿಯಾಗಿ ಬದುಕಬೇಕು.

ಮಹಿಳೆ ತನ್ನ ಶಕ್ತಿ ಸಾಮರ್ಥ್ಯದಿಂದ ಬದುಕಬೇಕು. ಬರುವ ಅಡ್ಡಿ ಆತಂಕಗಳನ್ನು ತಾನೇ ನಿವಾರಿಸಿಕೊಳ್ಳುವಷ್ಟು ಶಿಕ್ಷಿತಳಾಗಿರಬೇಕು. ತನ್ನ ಬೇಕು ಬೇಡಗಳನ್ನು ಪೂರೈಸಿಕೊ ಳ್ಳುವಷ್ಟು ಆತ್ಮವಿಶ್ವಾಸದಿಂದ ಬದುಕಬೇಕು. "ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ" ಎಂಬ ಮಾತಿನಂತೆ ನನ್ನ ಕುಟುಂಬದ ಶೈಕ್ಷಣಿಕ, ಮಾನಸಿಕ ಬೆಳವಣಿಗೆಗೆ ಹೆಣ್ಣು ಮಾದರಿಯಾಗಿರಬೇಕು. "ಕ್ಷಮಯಾದರಿತ್ರಿ" ಎಂದು ಕರೆಸಿಕೊಳ್ಳುವ ಹೆಣ್ಣು ಪ್ರೀತಿ ವಿಶ್ವಾಸದ ಪ್ರತೀಕ. ಕುಟುಂಬದಲ್ಲಿ ಪ್ರೀತಿ ಸ್ನೇಹ ಹಂಚುವಲ್ಲಿ ಯಶಸ್ವಿಯಾಗುತ್ತಾಳೆ.

ಇಂದಿಗೂ ಮಹಿಳೆ ತನ್ನ ಆಸೆ ಕನಸುಗಳನ್ನು ತಮ್ಮವರ ಮುಖದಲ್ಲಿ ನಗು ತರುವುದರ ಮೂಲಕ ಈಡೇರಿಸಿಕೊಳ್ಳಲು ಬಯಸುತ್ತಾಳೆ. ತನ್ನ ಆಸೆ ಆಕಾಂಕ್ಷೆಗಳನ್ನು ತನ್ನವರ ಮೇಲೆ ಹೇರುವುದರ ಬದಲಾಗಿ ತಾನೇ ಸಾಧಿಸಲು ಪ್ರಯತ್ನ ಪಡಬೇಕು. ಮಹಿಳೆ ತನ್ನ ಇಷ್ಟದ ಪ್ರಕಾರ ನಡೆಯಬೇಕು. ಮದುವೆಗೆ ಮುಂಚೆ ಎಲ್ಲಾ ಚಟುವಟಿಕೆಗಳಲ್ಲೂ ಆಟ ಪಾಠಗಳೇ ಇರಲಿ, ಸಾಹಿತ್ಯವೇ ಇರಲಿ , ನೃತ್ಯ, ಹಾಡುಗಾರಿಕೆ, ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಮಿಂಚುತ್ತಿದ್ದ ಮಹಿಳೆ ಮದುವೆಯ ನಂತರ ಮೌನವಾಗಲು ಕಾರಣವೇನು ? ಅವಳನ್ನು ಮೌನವಾಗಿಸಲು ಪ್ರಯತ್ನಿಸದೇ ಅವಳ ಆಸೆ ಆಕಾಂಕ್ಷೆಗಳಿಗೆ ನೀರೆರೆದಾಗ ಅವಳು ತನ್ನ ಜೀವನದ ಜೊತೆ ತನ್ನವರ ಜೀವನದ ಜವಾಬ್ದಾರಿಯನ್ನು ಈಡೇರಿಸಲು ಶಕ್ತಳಾಗುತ್ತಾಳೆ.

ಇಡೀ ಜೀವನದಲ್ಲಿ ಒಂದು ಮುಷ್ಟಿಯಾದರೂ ಅವಳಿಗೋಸ್ಕರ ಇಟ್ಟುಕೊಳ್ಳಬೇಕು. ದಿನದ ಅರ್ಧ ಗಂಟೆಯಾದರೂ ನಮಗೋಸ್ಕರ ನಾವು ಮೀಸಲಿಡಬೇಕು, ಅಡುಗೆ ಮನೆಯಿಂದ ಕೊಂಚವಾದರೂ ಹಿಂದೆ ಸರಿಯುವ ಮನಸ್ಸು ಮಾಡಬೇಕು. ತನ್ನ ಬದುಕನ್ನು ತಾನೇ ರಚನಾತ್ಮಕವಾಗಿ ಕಟ್ಟಿಕೊಳ್ಳುವ ಅವಶ್ಯಕತೆ ಹೆಣ್ಣಿಗೆ ಇದೆ. ತನ್ನ ಮನಸ್ಸನ್ನು ದೌರ್ಬಲ್ಯದ ಕೈಗೆ ಕೊಡದೆ ದೇಹವನ್ನು, ಮನಸ್ಸನ್ನು ಶಕ್ತಿಯುತಗೊಳಿಸಬೇಕು. ಮಹಿಳೆ ತನ್ನನ್ನು ತಾನು ಬೊಂಬೆ ಎಂದು ಭಾವಿಸದೆ ಸಮಾಜಕ್ಕೋಸ್ಕರ ತನ್ನನ್ನು ತಾನು ತೆರೆದುಕೊಳ್ಳಬೇಕು, ಕ್ರಿಯಾಶೀಲರಾಗಿ ಲವಲವಿಕೆಯಿಂದ ಕೆಲಸ ಕಾರ್ಯಗಳಲ್ಲಿ ತೊಡಗಿಕೊಳ್ಳಬೇಕು.

ಕೊನೆಯದಾಗಿ ಗಂಡಸರೇ, ನಿಮ್ಮ ಹೆಂಡತಿಯರನ್ನು ಕೇಳಿ "ನಿಮಗೆ ಏನಾದರೂ ಕನಸುಗಳಿವೆಯೇ? ಎಂದು , "ನಿಮ್ಮ ಇಷ್ಟವೇನು"? ಎಂದು. ಜೀವನಪೂರ್ತಿ ನಿಮ್ಮ ಕನಸಿಗೆ ಬೆನ್ನೆಲುಬಾಗುವ ಹೆಂಗಸರಿಗೂ ಕೆಲವೊಂದು ಆಸೆಗಳು ಇರುತ್ತವೆ, ಈಡೇರಿಸಲು ಪ್ರಯತ್ನಿಸಿ. ಮಹಿಳೆಯರನ್ನು ಅಡುಗೆ ಮನೆಗೆ ಸೀಮಿತವಾಗಿರಿಸದೇ ಅವರ ಆಸೆ ಆಕಾಂಕ್ಷೆಗಳಿಗೂ ಸ್ಪಂದಿಸಿದಾಗ ಮಹಿಳಾ ದಿನಾಚರಣೆಗೆ ಒಂದು ಅರ್ಥ ಬರುತ್ತದೆ. OOOO

